CONSTITUTIONAL DESIGN

# ಸಾಂವಿಧಾನಿಕ ವಿನ್ಯಾಸ

## ಸ್ಥೂಲ ನೋಟ

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಆಳುವವರು ತಮ್ಮ ಇಚ್ಛಾನುಸಾರ ನಡೆದುಕೊಳ್ಳುವಂತಿಲ್ಲ ಎಂಬುದನ್ನು ನಾವು ಈ ಹಿಂದಿನ ಅಧ್ಯಾಯದಲ್ಲಿ ಗಮನಿಸಿದೆವು. ನಾಗರಿಕರು ಮತ್ತು ಸರ್ಕಾರವು ಕೆಲವು ಮೂಲಭೂತ ನಿಯಮಗಳನ್ನು ಪಾಲಿಸಬೇಕು. ಇಂತಹ ಎಲ್ಲಾ ನಿಯಮಗಳನ್ನು ಸಂವಿಧಾನ ಎಂದು ಕರೆಯಲಾಗುತ್ತದೆ. ದೇಶದ ಅತ್ಯುನ್ನತ ಕಾನೂನು ಎನಿಸಿರುವ ಸಂವಿಧಾನವು; ನಾಗರಿಕರ ಹಕ್ಕುಗಳನ್ನು, ಸರ್ಕಾರದ ಅಧಿಕಾರಗಳನ್ನು ಮತ್ತು ಸರ್ಕಾರವು ಹೇಗೆ ಕಾರ್ಯನಿರ್ವಹಿಸಬೇಕು ಎಂಬುದ.ನ್ನು ಗೊತ್ತುಪಡಿಸುತ್ತದೆ.

ಈ ಅಧ್ಯಾಯದಲ್ಲಿ ನಾವು ಪ್ರಜಾಪ್ರಭುತ್ವ ವ್ಯವಸ್ಥೆಯ ಸಾಂವಿಧಾನಿಕ ವಿನ್ಯಾಸದ ಕುರಿತು ಕೆಲವು ಮೂಲಭೂತ ಪ್ರಶ್ನೆಗಳನ್ನು ಕೇಳಲಿದ್ದೇವೆ. ಸಂವಿಧಾನ ನಮಗೆ ಏಕೆ ಬೇಕು? ಸಂವಿಧಾನಗಳನ್ನು ಹೇಗೆ ರಚಿಸಲಾಗಿದೆ? ಅದನ್ನು ಯಾರು ಮತ್ತು ಯಾವ ರೀತಿ ರೂಪಿಸುತ್ತಾರೆ? ಪ್ರಜಾಸತ್ತಾತ್ಮಕ ರಾಷ್ಟ್ರಗಳ ಸಂವಿಧಾನಗಳನ್ನು ರೂಪಿಸುವ ಮೌಲ್ಯಗಳು ಯಾವುವು? ಒಮ್ಮೆ ಸಂವಿಧಾನವನ್ನು ಅಂಗೀಕರಿಸಿದ ನಂತರ, ಬದಲಾದ ಪರಿಸ್ಥಿತಿಗೆ ತಕ್ಕಂತೆ ನಾವು ಬದಲಾವಣೆಗಳನ್ನು ಮಾಡಬಹುದೇ?

**ಪ್ರಜಾತಾಂತ್ರಿಕ ದೇಶಕ್ಕೆ ಸಂವಿಧಾನವನ್ನು ವಿನ್ಯಾಸಗೊಳಿಸಿದ ಇತ್ತೀಚಿನ ಉದಾಹರಣೆ ಎಂದರೆ, ದಕ್ಷಿಣ ಆಫ್ರಿಕಾ. ಅಲ್ಲಿ ಏನಾಯಿತು ಮತ್ತು ಅವರ ಸಂವಿಧಾನವನ್ನು ವಿನ್ಯಾಸಗೊಳಿಸುವ ಕೆಲಸವನ್ನು ದಕ್ಷಿಣ ಆಫ್ರಿಕಾ ಹೇಗೆ ನಿರ್ವಹಿಸಿತು ಎಂಬ ವಿಷಯದೊಂದಿಗೆ ನಾವು ಈ ಅಧ್ಯಾಯವನ್ನು ಆರಂಭಿಸುತ್ತೇವೆ. ನಂತರ ನಾವು, ಭಾರತದ ಸಂವಿಧಾನವನ್ನು ಹೇಗೆ ರಚಿಸಲಾಯಿತು, ಇದರ ಮೂಲಭೂತ ಮೌಲ್ಯಗಳೇನು ಮತ್ತು ಹೇಗೆ ಇದು ನಾಗರಿಕರ ಬದುಕು ಮತ್ತು ಸರ್ಕಾರದ ನಡವಳಿಕೆಗೆ ಉತ್ತಮ ಚೌಕಟ್ಟನ್ನು ಒದಗಿಸುತ್ತದೆ ಎಂಬುದರ ಕುರಿತು ಬೆಳಕು ಹರಿಸಲಿದ್ದೇವೆ.**

# 3.1 ದಕ್ಷಿಣ ಆಫ್ರಿಕಾದ ಪ್ರಜಾಸತ್ತಾತ್ಮಕ ಸಂವಿಧಾನ



ನೆಲ್ಸನ್ ಮಂಡೇಲ

"ನಾನು ಬಿಳಿಯರ ಪ್ರಾಬಲ್ಯ ಮತ್ತು ಕರಿಯರ ಪ್ರಾಬಲ್ಯದ ವಿರುದ್ಧ ಹೋರಾಡಿದ್ದೇನೆ. ಸಾಮರಸ್ಯ ಮತ್ತು ಸಮಾನ ಅವಕಾಶಗಳೊಂದಿಗೆ ಜನರು ಒಟ್ಟಿಗೆ ಬದುಕಬಹುದಾದ ಪ್ರಜಾಸತ್ತಾತ್ಮಕ ಮತ್ತು ಮುಕ್ತ ಸಮಾಜದ ಆದರ್ಶವನ್ನು ಪೋಷಿಸಿದ್ದೇನೆ. ಈ ಆದರ್ಶಕ್ಕಾಗಿ ಬದುಕಲು ಮತ್ತು ಇದನ್ನು ಸಾಧಿಸಲು ನಾನು ಇಚ್ಛಿಸುತ್ತೇನೆ. ಆದರೆ ಅಗತ್ಯವೆನಿಸಿದಲ್ಲಿ ಈ ಆದರ್ಶಕ್ಕಾಗಿ ಪ್ರಾಣ ಕೊಡಲು ನಾನು ಸಿದ್ಧನಿದ್ದೇನೆ."

ಬಿಳಿಯರ ದಕ್ಷಿಣ ಆಫ್ರಿಕಾ ಸರ್ಕಾರದಿಂದ ದೇಶದ್ರೋಹಕ್ಕಾಗಿ ವಿಚಾರಣೆಗೆ ಒಳಗಾದ ನೆಲ್ಸನ್ ಮಂಡೇಲ ಅವರ ಮಾತುಗಳಿವು. ಅವರ ದೇಶದಲ್ಲಿ ವರ್ಣಭೇದ ನೀತಿಯನ್ನು ಅನುಸರಿಸುತ್ತಿದ್ದ ಸರ್ಕಾರವನ್ನು ವಿರೋಧಿಸುವ ಧೈರ್ಯ ತೋರಿದುದಕ್ಕಾಗಿ ನೆಲ್ಸನ್ ಮಂಡೇಲ ಮತ್ತು ಇತರ ಏಳು ಮಂದಿ ನಾಯಕರಿಗೆ 1964ರಲ್ಲಿ ಜೀವಾವಧಿ ಸಜೆ ವಿಧಿಸಲಾಯಿತು. ಅವರು ಮುಂದಿನ 28 ವರ್ಷಗಳನ್ನು ದಕ್ಷಿಣ ಆಫ್ರಿಕಾದ ಅತ್ಯಂತ ಭಯಾನಕ ರಾಬನ್ ದ್ವೀಪದ ಜೈಲಿನಲ್ಲಿ ಕಳೆದರು.

**1**

ವರ್ಣಭೇದ ಯುಗದ ಉದ್ವಿಗ್ನ ಸಂಬಂಧಗಳನ್ನು ಸೂಚಿಸುವ ನಾಮಫಲಕ, 1953.




**1**

**ಅಪಾಯ!**
ಸ್ಥಳೀಯರು, ಭಾರತೀಯರು ಮತ್ತು ಮಿಶ್ರವರ್ಣೀಯರೇ,
ನೀವು ರಾತ್ರಿಯ ಹೊತ್ತು ಈ ಆವರಣಗಳನ್ನು ಪ್ರವೇಶಿಸಿದಲ್ಲಿ, ನಿಮ್ಮನ್ನು ಕಾಣೆಯಾದವರ ಪಟ್ಟಿಗೆ ಸೇರಿಸಲಾಗುತ್ತದೆ.
ಸಶಸ್ತ್ರ ಕಾವಲುಗಾರರು ಕಂಡಲ್ಲಿ ಗುಂಡಿಕ್ಕುತ್ತಾರೆ, ಕ್ರೂರ ನಾಯಿಗಳು ಹೆಣವನ್ನು ತಿಂದುಹಾಕುತ್ತವೆ.
ನಿಮಗೆ ಎಚ್ಚರಿಕೆ ನೀಡಲಾಗಿದೆ!

## ವರ್ಣಭೇದ ನೀತಿಯ ವಿರುದ್ಧ ಹೋರಾಟ

ವರ್ಣಭೇದ ನೀತಿಯು ಜನಾಂಗೀಯ ತಾರತಮ್ಯದ ವ್ಯವಸ್ಥೆಯಾಗಿದ್ದು ಇದನ್ನು ದಕ್ಷಿಣ ಆಫ್ರಿಕಾದಲ್ಲಿ ಕಾಣಬಹುದು. ಬಿಳಿಯ ಯುರೋಪಿಯನ್ನರು ಈ ವ್ಯವಸ್ಥೆಯನ್ನು ದಕ್ಷಿಣ ಆಫ್ರಿಕಾದ ಮೇಲೆ ಹೇರಿದರು. ಭಾರತವನ್ನು ವಶಪಡಿಸಿಕೊಂಡಂತೆಯೇ, ಹದಿನೇಳನೆಯ ಮತ್ತು ಹದಿನೆಂಟನೆಯ ಶತಮಾನಗಳಲ್ಲಿ ಯುರೋಪಿನ ವ್ಯಾಪಾರಿ ಸಂಸ್ಥೆಗಳು ಶಸ್ತ್ರಾಸ್ತ್ರ ಮತ್ತು ಬಲಪ್ರಯೋಗದೊಂದಿಗೆ ಈ ದೇಶವನ್ನು ವಶಪಡಿಸಿಕೊಂಡವು. ಆದರೆ, ನಂತರದ ಸ್ಥಿತಿ ಭಾರತಕ್ಕಿಂತ ಕೊಂಚ ಭಿನ್ನವಾಗಿತ್ತು. 'ಬಿಳಿಯರು' ಅಪಾರ ಸಂಖ್ಯೆಯಲ್ಲಿ ದಕ್ಷಿಣ ಆಫ್ರಿಕಾದಲ್ಲಿ ನೆಲೆ ನಿಂತು, ಸ್ಥಳೀಯ ಪ್ರಭುಗಳೆನಿಸಿದರು. ವರ್ಣಭೇದ ನೀತಿಯು ಜನರನ್ನು ವಿಂಗಡಿಸಿತಲ್ಲದೆ, ಚರ್ಮದ ಬಣ್ಣದ ಆಧಾರದಲ್ಲಿ ಅವರನ್ನು ವರ್ಗೀಕರಿಸಲಾಯಿತು. ದಕ್ಷಿಣ ಆಫ್ರಿಕಾದ ಸ್ಥಳೀಯ ಜನರು ಕಪ್ಪು ಬಣ್ಣದವರಾಗಿದ್ದಾರೆ. ಅವರು ಒಟ್ಟು ಜನಸಂಖ್ಯೆಯ ಸುಮಾರು ನಾಲ್ಕನೇ ಮೂರರಷ್ಟಿದ್ದು; ಅವರನ್ನು 'ಕರಿಯರು' ಎಂದು ಕರೆಯಲಾಗುತ್ತಿತ್ತು. ಈ ಎರಡು ವರ್ಗಗಳಲ್ಲದೆ ಅಲ್ಲಿ ಮಿಶ್ರ ಜನಾಂಗದ ಜನರಿದ್ದರು. ಅವರನ್ನು 'ಮಿಶ್ರವರ್ಣದ' ಜನರೆಂದು ಕರೆಯಲಾಗುತ್ತಿತ್ತು. ಇಲ್ಲಿ ಭಾರತದಿಂದ ವಲಸೆ ಹೋದ ಜನರಿದ್ದರು. ಬಿಳಿಯ ರಾಜರು ಎಲ್ಲಾ ಬಿಳಿಯೇತರ ಜನರನ್ನು ಕೆಳವರ್ಗದವರೆಂಬಂತೆ ನಡೆಸಿಕೊಳ್ಳುತ್ತಿದ್ದರು. ಬಿಳಿಯೇತರರಿಗೆ ಮತದಾನದ ಹಕ್ಕಿರಲಿಲ್ಲ.

ವರ್ಣಭೇದ ನೀತಿಯು ಮುಖ್ಯವಾಗಿ ಕರಿಯರಿಗೆ ಅಸಹನೀಯವಾಗಿತ್ತು. ಬಿಳಿಯರ ಪ್ರದೇಶದಲ್ಲಿ ಅವರು ವಾಸಿಸಲು ಅವಕಾಶವಿರಲಿಲ್ಲ. ಪರವಾನಗಿ ಇದ್ದಲ್ಲಿ ಮಾತ್ರ ಅವರು ಬಿಳಿಯರ ಪ್ರದೇಶದಲ್ಲಿ ಕೆಲಸ




**2**

ಡರ್ಬಾನ್ ಬೀಚಿನಲ್ಲಿರುವ ಫಲಕವು, ಇಂಗ್ಲಿಷ್, ಆಫ್ರಿಕಾನ್ಸ್ ಮತ್ತು ಝುಲು ಭಾಷೆಗಳಲ್ಲಿದ್ದು; ಇಂಗ್ಲಿಷಿನಲ್ಲಿ ಇದರ ಅರ್ಥವು ಹೀಗಿದೆ: **'ಡರ್ಬಾನ್ ಬೀಚ್ ಉಪನಿಯಮ 37ರ ಪ್ರಕಾರ, ಈ ಸ್ನಾನದ ಪ್ರದೇಶವನ್ನು ಬಿಳಿ ವರ್ಣದ ಪಂಗಡಕ್ಕೆ ಸೇರಿದವರ ಬಳಕೆಗಾಗಿ ಮೀಸಲಿರಿಸಲಾಗಿದೆ.'**

ಮಾಡಬಹುದಾಗಿತ್ತು. ರೈಲುಗಳು, ಬಸ್ಸುಗಳು, ಟ್ಯಾಕ್ಸಿಗಳು, ಹೋಟೆಲ್ ಗಳು, ಆಸ್ಪತ್ರೆಗಳು, ಶಾಲೆಗಳು ಮತ್ತು ಕಾಲೇಜುಗಳು, ವಾಚನಾಲಯಗಳು, ಚಿತ್ರಮಂದಿರಗಳು, ರಂಗಮಂದಿರಗಳು, ಸಮುದ್ರ ತೀರಗಳು, ಈಜುಕೊಳಗಳು ಹಾಗೂ ಸಾರ್ವಜನಿಕ ಶೌಚಾಲಯಗಳು; ಬಿಳಿಯರು ಮತ್ತು ಕರಿಯರಿಗೆ ಪ್ರತ್ಯೇಕವಾಗಿದ್ದವು. ಇದನ್ನು ಪ್ರತ್ಯೇಕಿಸುವುದು ಎಂದು ಕರೆಯಲಾಯಿತು. ಬಿಳಿಯರು ಪ್ರಾರ್ಥನೆ ಸಲ್ಲಿಸುತ್ತಿದ್ದ ಚರ್ಚುಗಳಿಗೂ ಸಹ ಕರಿಯರಿಗೆ ಪ್ರವೇಶವಿರಲಿಲ್ಲ. ಕರಿಯರು ಸಂಘಟನೆಗಳನ್ನು ರೂಪಿಸುವಂತಿರಲಿಲ್ಲ ಅಥವಾ ಈ ಭೀಕರ ವರ್ತನೆಯ ವಿರುದ್ಧ ಪ್ರತಿಭಟಿಸುವಂತೆಯೂ ಇರಲಿಲ್ಲ.

1950ರ ನಂತರ ಕರಿಯರು, ಮಿಶ್ರವರ್ಣದ ಜನರು ಮತ್ತು ಭಾರತೀಯರು ವರ್ಣಭೇದ ನೀತಿಯ ವಿರುದ್ಧ ಹೋರಾಡಿದರು. ಅವರು ಪ್ರತಿಭಟನಾ ಮೆರವಣಿಗೆ ಮತ್ತು ಮುಷ್ಕರಗಳನ್ನು ಪ್ರಾರಂಭಿಸಿದರು. ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ (ಎ.ಎನ್.ಸಿ.), ಪ್ರತ್ಯೇಕತೆಯ ನೀತಿಗಳ ವಿರುದ್ಧ ನಡೆಸಿದ ಹೋರಾಟಗಳಿಗೆ ಮಾರ್ಗದರ್ಶನವಿತ್ತ ಮಾತೃಸಂಸ್ಥೆ ಎನಿಸಿತು. ಇದು ಅನೇಕ ಕಾರ್ಮಿಕ ಸಂಘಟನೆಗಳು ಮತ್ತು ಕಮ್ಯೂನಿಸ್ಟ್ ಪಕ್ಷವನ್ನು ಒಳಗೊಂಡಿತ್ತು. ವರ್ಣಭೇದ ನೀತಿಯನ್ನು ವಿರೋಧಿಸಲು ಅನೇಕ ಸೂಕ್ಷ್ಮಸಂವೇದಿ ಬಿಳಿಯರು ಸಹ ಎ.ಎನ್.ಸಿ.ಯನ್ನು ಸೇರಿದರು ಮತ್ತು ಈ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದರು. ಅನೇಕ ದೇಶಗಳು ವರ್ಣಭೇದವು ಅನ್ಯಾಯದಿಂದ ಕೂಡಿದ್ದು, ಜನಾಂಗೀಯವಾದಿ ಎಂಬುದಾಗಿ ಅದನ್ನು ದೂಷಿಸಿದವು. ಆದರೆ, ಸಾವಿರಾರು ಕರಿಯರು ಮತ್ತು ಮಿಶ್ರವರ್ಣೀಯರ ಬಂಧನ, ಚಿತ್ರಹಿಂಸೆ ಮತ್ತು ಕೊಲೆಯ ಮೂಲಕ ಬಿಳಿಯ ಜನಾಂಗೀಯವಾದಿ ಸರ್ಕಾರವು ಆಳ್ವಿಕೆಯನ್ನು ಮುಂದುವರಿಸಿತು.

## ಕಾರ್ಯ ಚಟುವಟಿಕೆ

- **ನೆಲ್ಸನ್ ಮಂಡೇಲ ಅವರ ಬದುಕು ಮತ್ತು ಹೋರಾಟದ ಕುರಿತು ಭಿತ್ತಿಪತ್ರವನ್ನು ರಚಿಸಿ.**
- **ಲಭ್ಯವಿದ್ದಲ್ಲಿ, ತರಗತಿಯಲ್ಲಿ ಅವರ ಆತ್ಮಚರಿತ್ರೆ, 'ದ ಲಾಂಗ್ ವಾಕ್ ಟು ಫ್ರೀಡಂ'ನ ಕೆಲ ಭಾಗಗಳನ್ನು ಓದಿರಿ.**

## ಹೊಸ ಸಂವಿಧಾನದತ್ತ

ವರ್ಣಭೇದ ನೀತಿಯ ವಿರುದ್ಧ ಪ್ರತಿಭಟನೆ ಮತ್ತು ಹೋರಾಟಗಳು ಹೆಚ್ಚಿದಂತೆ, ದಬ್ಬಾಳಿಕೆಯ ಮೂಲಕ ಕರಿಯರನ್ನು ತಮ್ಮ ಹಿಡಿತದಲ್ಲಿಡುವುದು ಇನ್ನು ಸಾಧ್ಯವಿಲ್ಲ ಎಂಬುದನ್ನು ಸರ್ಕಾರವು ಮನಗಂಡಿತು. ಬಿಳಿಯ ಸಾಮ್ರಾಜ್ಯವು ತನ್ನ ನೀತಿಗಳನ್ನು ಬದಲಾಯಿಸಿತು. ತಾರತಮ್ಯ ನೀತಿಯ ಕಾನೂನುಗಳನ್ನು ಹಿಂಪಡೆಯಲಾಯಿತು. ರಾಜಕೀಯ ಪಕ್ಷಗಳು ಮತ್ತು ಮಾಧ್ಯಮದ ಮೇಲಿನ ನಿಷೇಧವನ್ನು ತೆಗೆದುಹಾಕಲಾಯಿತು. 28 ವರ್ಷಗಳ ಜೈಲುವಾಸದ ನಂತರ ನೆಲ್ಸನ್ ಮಂಡೇಲ ಅವರು ಸ್ವತಂತ್ರ ವ್ಯಕ್ತಿಯಾಗಿ ಜೈಲಿನಿಂದ ಹೊರನಡೆದರು. ಅಂತಿಮವಾಗಿ, 1994ರ ಏಪ್ರಿಲ್ 26ನೇ ಮಧ್ಯರಾತ್ರಿ, ವಿಶ್ವದಲ್ಲಿ ಹೊಸದಾಗಿ ಉದಯವಾದ ಪ್ರಜಾಸತ್ತೆಯ ಗುರುತಾಗಿ, ದಕ್ಷಿಣ ಆಫ್ರಿಕಾ ಗಣತಂತ್ರದ ಹೊಸ ರಾಷ್ಟ್ರೀಯ ಬಾವುಟವನ್ನು ಹಾರಿಸಲಾಯಿತು. ವರ್ಣಭೇದ ನೀತಿಯ ಸರ್ಕಾರ ಕೊನೆಗೊಂಡು ಬಹುಜನಾಂಗೀಯ ಸರ್ಕಾರದ ರಚನೆಗೆ ವೇದಿಕೆ ಸೃಷ್ಟಿಯಾಯಿತು.

ಇದು ಹೇಗೆ ಸಾಧ್ಯವಾಯಿತು? ಈ ಅಸಾಧಾರಣ ಪರಿವರ್ತನೆಯ ಕುರಿತು ಹೊಸ ದಕ್ಷಿಣ ಆಫ್ರಿಕಾದ ಮೊದಲ ಅಧ್ಯಕ್ಷರಾದ ಮಂಡೇಲ ಅವರು ಆಡಿದ ಮಾತುಗಳನ್ನು ಕೇಳೋಣ:

*''ಒಳ್ಳೆಯತನಕ್ಕಾಗಿ ಇತರರ ಅಂತರ್ಗತ ಸಾಮರ್ಥ್ಯವನ್ನು ಸ್ವೀಕರಿಸಲು ನಾವು ಸಿದ್ಧರಿದ್ದ ಕಾರಣ, ವರ್ಣಭೇದದಿಂದ ಪ್ರಜಾಸತ್ತೆಯೆಡೆಗಿನ ಶಾಂತಿಯುತ ಪರಿವರ್ತನೆಯ ನಿಟ್ಟಿನ ಮಾತುಕತೆಯಲ್ಲಿ ಐತಿಹಾಸಿಕ ಶತ್ರುಗಳು ಯಶಸ್ವಿಯಾದರು. ದಕ್ಷಿಣ ಆಫ್ರಿಕನ್ನರು ಎಂದಿಗೂ ಒಳ್ಳೆಯತನದಲ್ಲಿರುವ ನಂಬಿಕೆಯನ್ನು ಕಳೆದುಕೊಳ್ಳುವುದಿಲ್ಲ ಎಂದು ನಾನು ಆಶಿಸುತ್ತೇನೆ. ಮನುಜರಲ್ಲಿ ಆ ನಂಬಿಕೆಯನ್ನು ಅವರು ಪೋಷಿಸಬೇಕೆಂಬುದು ನಮ್ಮ ಪ್ರಜಾಪ್ರಭುತ್ವದ ವ್ಯವಸ್ಥೆಯ ಮೂಲೆಗಲ್ಲು.''*

ಹೊಸ ಪ್ರಜಾಸತ್ತಾತ್ಮಕ ದಕ್ಷಿಣ ಆಫ್ರಿಕಾದ ಉದಯದ ನಂತರ, ಬಿಳಿಯರು ಅಧಿಕಾರದಲ್ಲಿದ್ದಾಗ ನಡೆಸಿದ ದೌರ್ಜನ್ಯವನ್ನು ಕ್ಷಮಿಸಿಬಿಡುವಂತೆ ಕರಿಯ ನಾಯಕರು ತಮ್ಮ ಕರಿಯ ಸಂಗಡಿಗರಲ್ಲಿ ವಿನಂತಿಸಿದರು. ಎಲ್ಲ ಜನಾಂಗಗಳು ಹಾಗೂ ಪುರುಷರು ಮತ್ತು ಮಹಿಳೆಯರ ನಡುವಿನ ಸಮಾನತೆ, ಪ್ರಜಾಸತ್ತಾತ್ಮಕ ಮೌಲ್ಯಗಳು, ಸಾಮಾಜಿಕ ನ್ಯಾಯ ಮತ್ತು ಮಾನವ ಹಕ್ಕುಗಳನ್ನು ಆಧರಿಸಿದ ಹೊಸ ದಕ್ಷಿಣ ಆಫ್ರಿಕಾವನ್ನು ನಿರ್ಮಿಸೋಣ ಎಂದು ಅವರು ಹೇಳಿದರು. ಸರ್ವರ ಸಂವಿಧಾನವನ್ನು ರೂಪಿಸುವುದಕ್ಕಾಗಿ, ದಬ್ಬಾಳಿಕೆ ಮತ್ತು ಕ್ರೂರ ಕೊಲೆಯ ಮೂಲಕ ಆಳ್ವಿಕೆ ನಡೆಸಿದ ಪಕ್ಷ ಮತ್ತು ಸ್ವಾತಂತ್ರ್ಯ ಹೋರಾಟವನ್ನು ಮುನ್ನಡೆಸಿದ ಪಕ್ಷ – ಇವೆರಡೂ ಒಟ್ಟಿಗೆ ಕುಳಿತುಕೊಂಡವು.

ಎರಡು ವರ್ಷಗಳ ಮಾತುಕತೆ ಮತ್ತು ಚರ್ಚೆಯ ಫಲವಾಗಿ ವಿಶ್ವವು ಈತನಕ ಹೊಂದಿರದ ಅತ್ಯುತ್ತಮ



ಬಿಳಿಯರು ತಮ್ಮ ಮೇಲೆ ನಡೆಸಿದ ದಬ್ಬಾಳಿಕೆ ಮತ್ತು ಶೋಷಣೆಗೆ ಕರಿಯರು ಪ್ರತೀಕಾರ ಸಾಧಿಸಲು ಇಚ್ಛಿಸಿದ್ದರೆ ದಕ್ಷಿಣ ಆಫ್ರಿಕಾದಲ್ಲಿ ಏನಾಗುತ್ತಿತ್ತು?




This image captures the spirit of South Africa today. South Africans call themselves a 'rainbow nation'. Can you guess why?

ಸಂವಿಧಾನವೊಂದು ರಚನೆಯಾಯಿತು. ಯಾವುದೇ ರಾಷ್ಟ್ರದಲ್ಲಿ ಲಭ್ಯವಿರುವ ಅತ್ಯಂತ ವ್ಯಾಪಕ ಹಕ್ಕುಗಳನ್ನು ಈ ಸಂವಿಧಾನವು ತನ್ನ ಜನರಿಗೆ ನೀಡಿತು. ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕುವಾಗ ಯಾರನ್ನೂ ಹೊರಗಿಡಬಾರದು. ಯಾರನ್ನೂ ರಾಕ್ಷಸರಂತೆ ನೋಡಬಾರದು ಎಂಬುದನ್ನು ಅವರು ಒಟ್ಟಾಗಿ ನಿರ್ಣಯಿಸಿದರು. ಪ್ರತಿಯೊಬ್ಬರೂ, ಅವರು ಈ ಹಿಂದೆ ಏನು ಮಾಡಿದ್ದರೂ ಅಥವಾ ಏನನ್ನು ಪ್ರತಿನಿಧಿಸಿದ್ದರೂ, ಪರಿಹಾರದ ಭಾಗವೆನಿಸಬೇಕು ಎಂಬುದನ್ನು ಅವರು ಒಪ್ಪಿಕೊಂಡರು. ದಕ್ಷಿಣ ಆಫ್ರಿಕಾದ ಸಂವಿಧಾನದ (ಪುಟ 50ನ್ನು ನೋಡಿ) ಪೀಠಿಕೆಯು ಈ ಸ್ಫೂರ್ತಿಯ ಸಾರಾಂಶವನ್ನು ತಿಳಿಸುತ್ತದೆ.

ದಕ್ಷಿಣ ಆಫ್ರಿಕಾದ ಸಂವಿಧಾನವು ಪ್ರಪಂಚದಾದ್ಯಂತ ಪ್ರಜಾಪ್ರಭುತ್ವವಾದಿಗಳಿಗೆ ಪ್ರೇರಣೆ ನೀಡುತ್ತದೆ. ಪ್ರಜಾಪ್ರಭುತ್ವ ವಿರೋಧಿ ಎಂದು ಇತ್ತೀಚಿನವರೆಗೆ ಇಡೀ ವಿಶ್ವದಿಂದ ದೂಷಣೆಗೆ ಒಳಗಾಗಿದ್ದ ರಾಷ್ಟ್ರವೊಂದನ್ನು ಈಗ ಪ್ರಜಾಪ್ರಭುತ್ವದ ಮಾದರಿಯಾಗಿ ನೋಡಲಾಗುತ್ತಿದೆ. ದಕ್ಷಿಣ ಆಫ್ರಿಕಾದ ಜನರ ಒಟ್ಟಿಗೆ ಕೆಲಸ ಮಾಡುವ ದೃಢ ನಿರ್ಧಾರ ಮತ್ತು ಬಹುವರ್ಣಗಳ ರಾಷ್ಟ್ರವೊಂದನ್ನು ಪರಸ್ಪರ ಬೆಸೆಯುವ ಬಂಧನವಾಗಿ ಕಹಿ ಅನುಭವಗಳ ಮಾರ್ಪಾಡು ಈ ಬದಲಾವಣೆಯನ್ನು ಸಾಧ್ಯವಾಗಿಸಿತು. ದಕ್ಷಿಣ ಆಫ್ರಿಕಾದ ಸಂವಿಧಾನದ ಕುರಿತು ಮಂಡೇಲ ಈ ರೀತಿ ಹೇಳಿದ್ದಾರೆ:

*"ದಕ್ಷಿಣ ಆಫ್ರಿಕಾದ ಸಂವಿಧಾನವು ಭೂತಕಾಲ ಮತ್ತು ಭವಿಷ್ಯ ಎರಡನ್ನೂ ಅಭಿವ್ಯಕ್ತಿಸುತ್ತದೆ. ಜೊತೆಗೆ, ನಮ್ಮ ಜನಾಂಗೀಯವಾದಿ, ಕ್ರೂರ ಮತ್ತು ದಮನಕಾರಿ ಭೂತಕಾಲವನ್ನು ಪುನರಾವರ್ತನೆಯಾಗಲು ಎಂದಿಗೂ ಬಿಡುವುದಿಲ್ಲ ಎಂಬುದು, ದಕ್ಷಿಣ ಆಫ್ರಿಕನ್ನರ ವಿಧ್ಯುಕ್ತ ಒಡಂಬಡಿಕೆಯಾಗಿದೆ. ಆದರೆ ಇದು ಅದಕ್ಕಿಂತಲೂ ಮಿಗಿಲಾಗಿದೆ. ದೇಶದ ಎಲ್ಲಾ ಜನರು ನಿಜವಾದ ಅರ್ಥದಲ್ಲಿ ಭಾಗಿಯಾಗುವ ದೇಶವಾಗಿ ಪರಿವರ್ತನೆಗೊಳ್ಳುವ ನಿಟ್ಟಿನಲ್ಲಿ– ಕರಿಯರು, ಬಿಳಿಯರು, ಮಹಿಳೆಯರು ಮತ್ತು ಪುರುಷರು ಸೇರಿದಂತೆ ಪೂರ್ಣ ಅರ್ಥದಲ್ಲಿ ನಮ್ಮೆಲ್ಲರಿಗೂ ಸೇರಿದ ದೇಶವಾಗಲು – ಇದೊಂದು ಶಾಸನಪತ್ರವೂ ಹೌದು."*

**ನಿಮ್ಮ ಪ್ರಗತಿಯನ್ನು ಪರಿಶೀಲಿಸಿ**

**ಸ್ವಾತಂತ್ರ್ಯಕ್ಕಾಗಿ ದಕ್ಷಿಣ ಆಫ್ರಿಕಾ ನಡೆಸಿದ ಹೋರಾಟದ ಕತೆಯು ನಿಮಗೆ ಭಾರತದ ರಾಷ್ಟ್ರೀಯ ಚಳವಳಿಯನ್ನು ನೆನಪಿಸುತ್ತದೆಯೇ?**
**ಈ ಕೆಳಗಿನ ಅಂಶಗಳ ಆಧಾರದಲ್ಲಿ ಈ ಎರಡು ಹೋರಾಟಗಳ ನಡುವಿನ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಪಟ್ಟಿ ಮಾಡಿ:**

- ವಸಾಹತುಶಾಹಿತ್ವದ ಸ್ವರೂಪ
- ವಿವಿಧ ಸಮುದಾಯಗಳ ನಡುವಿನ ಸಂಬಂಧ
- ನಾಯಕತ್ವ: ಗಾಂಧಿ/ಮಂಡೇಲ
- ಹೋರಾಟವನ್ನು ಮುನ್ನಡೆಸಿದ ಪಕ್ಷ: ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್/ಭಾರತೀಯ ರಾಷ್ಟ್ರೀಯ ಕಾಂಗ್ರೆಸ್
- ಹೋರಾಟದ ವಿಧಾನ

## 3.2 ನಮಗೆ ಸಂವಿಧಾನ ಏಕೆ ಬೇಕು?

ನಮಗೆ ಸಂವಿಧಾನ ಏಕೆ ಬೇಕು ಮತ್ತು ಸಂವಿಧಾನಗಳು ಏನು ಮಾಡುತ್ತವೆ ಎನ್ನುವುದನ್ನು ಅರ್ಥೈಸಿಕೊಳ್ಳಲು ದಕ್ಷಿಣ ಆಫ್ರಿಕಾದ ಮಾದರಿಯು ಉತ್ತಮ ಉದಾಹರಣೆಯಾಗಿದೆ. ದಬ್ಬಾಳಿಕೆಗಾರರು ಮತ್ತು ದಮನಕ್ಕೆ ಒಳಗಾದವರು ಈ ನೂತನ ಪ್ರಜಾತಾಂತ್ರಿಕತೆಯಡಿ ಸಮಾನರಾಗಿ ಒಟ್ಟಿಗೆ ಬಾಳಲು ಮುಂದಾದರು. ಪರಸ್ಪರರನ್ನು ನಂಬುವುದು ಅವರ ಪಾಲಿಗೆ ಸುಲಭಸಾಧ್ಯವಾಗಿರಲಿಲ್ಲ. ಅವರಿಗೆ ತಮ್ಮದೇ ಆದ ಭೀತಿಗಳಿದ್ದವು. ಅವರು ತಮ್ಮ ಹಿತಾಸಕ್ತಿಗಳನ್ನು ಕಾಪಾಡಲು ಇಚ್ಛಿಸುತ್ತಿದ್ದರು. ಬಹುಸಂಖ್ಯಾತರ ಆಳ್ವಿಕೆಯ ಪ್ರಜಾತಾಂತ್ರಿಕತೆಯ ತತ್ತ್ವವನ್ನು ರಾಜಿ ಮಾಡಿಕೊಳ್ಳಬಾರದು ಎಂಬುದನ್ನು ಖಾತರಿಪಡಿಸಿಕೊಳ್ಳಲು ಬಹುಸಂಖ್ಯಾತ ಕರಿಯರು ಉತ್ಸುಕರಾಗಿದ್ದರು. ಅವರಿಗೆ ಗಣನೀಯ ಸಾಮಾಜಿಕ ಮತ್ತು ಆರ್ಥಿಕ ಹಕ್ಕುಗಳು ಬೇಕಿತ್ತು. ಅಲ್ಪಸಂಖ್ಯಾತ ಬಿಳಿಯರು ತಮ್ಮ ಸವಲತ್ತುಗಳು ಮತ್ತು ಆಸ್ತಿಯನ್ನು ರಕ್ಷಿಸುವ ತವಕದಲ್ಲಿದ್ದರು.

ದೀರ್ಘಕಾಲದ ಚರ್ಚೆಯ ನಂತರ ಎರಡೂ ಪಕ್ಷಗಳು ರಾಜಿಮಾಡಿಕೊಳ್ಳಲು ಒಪ್ಪಿಕೊಂಡವು. 'ಬಹುಮತದ ಆಳ್ವಿಕೆಯ ನೀತಿ' ಮತ್ತು 'ಒಬ್ಬ ವ್ಯಕ್ತಿ ಒಂದು ಮತ' ಎಂಬ ತತ್ತ್ವವನ್ನು ಬಿಳಿಯರು ಒಪ್ಪಿಕೊಂಡರು. ಬಡವರು ಮತ್ತು ಕಾರ್ಮಿಕರಿಗೆ ಕೆಲ ಮೂಲಭೂತ ಹಕ್ಕುಗಳನ್ನು ನೀಡಲೂ ಸಹ ಅವರು ಸಮ್ಮತಿಸಿದರು. ಬಹುಮತದ ಆಳ್ವಿಕೆ ನಿರಂಕುಶವಾದುದಲ್ಲ ಎಂಬುದಾಗಿ ಕರಿಯರು ಒಪ್ಪಿಕೊಂಡರು. ಅಲ್ಪಸಂಖ್ಯಾತ ಬಿಳಿಯರ ಆಸ್ತಿಪಾಸ್ತಿಯನ್ನು ಬಹುಸಂಖ್ಯಾತರು ಕಸಿದುಕೊಳ್ಳಬಾರದು ಎಂಬುದಕ್ಕೆ ಅವರು ಸಮ್ಮತಿಸಿದರು. ಈ ರಾಜಿಯು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಈ ರಾಜಿಯನ್ನು ಹೇಗೆ ಕಾರ್ಯಗತಗೊಳಿಸಲಾಯಿತು? ಅವರು ಪರಸ್ಪರರಲ್ಲಿನ ನಂಬಿಕೆಯನ್ನು ನಿಭಾಯಿಸಿದರೂ, ಭವಿಷ್ಯದಲ್ಲಿ ಈ ನಂಬಿಕೆಯನ್ನು ಮುರಿಯುವುದಿಲ್ಲ ಎನ್ನುವುದಕ್ಕೆ ಖಾತರಿ ಏನಿದೆ?

ಇಂತಹ ಸಂದರ್ಭದಲ್ಲಿ ನಂಬಿಕೆಯನ್ನು ಬೆಳೆಸಲು ಮತ್ತು ಕಾಪಾಡಲು ಇರುವ ಒಂದೇ ದಾರಿಯೆಂದರೆ, ಎಲ್ಲರೂ ಪಾಲಿಸತಕ್ಕ ಕೆಲವು ನಿಯಮಗಳನ್ನು ಬರಹಕ್ಕಿಳಿಸುವುದು. ಭವಿಷ್ಯದಲ್ಲಿ ಆಡಳಿತಗಾರರನ್ನು ಹೇಗೆ ಆರಿಸಬೇಕು ಎನ್ನುವುದಕ್ಕೆ ಈ ನಿಯಮಗಳು ಒಂದು ಚೌಕಟ್ಟನ್ನು ಒದಗಿಸುತ್ತವೆ. ಚುನಾಯಿತ ಸರ್ಕಾರಗಳು ಏನನ್ನು ಮಾಡಲು ಅಧಿಕಾರ ಹೊಂದಿವೆ ಮತ್ತು ಅವು ಏನನ್ನು ಮಾಡಬಾರದು ಎನ್ನುವುದನ್ನು ಸಹ ಈ ನಿಯಮಗಳು ಗೊತ್ತುಪಡಿಸುತ್ತವೆ. ಅಂತಿಮವಾಗಿ, ಈ ನಿಯಮಗಳು ನಾಗರಿಕರ ಹಕ್ಕುಗಳನ್ನು ನಿರ್ಧರಿಸುತ್ತವೆ. ಗೆದ್ದವರು ಈ ನಿಯಮಗಳನ್ನು ಬದಲಾಯಿಸಲು ಸಾಧ್ಯವಿಲ್ಲದೆ ಇದ್ದಾಗ ಮಾತ್ರ ಇವು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತವೆ. ದಕ್ಷಿಣ ಆಫ್ರಿಕನ್ನರು ಮಾಡಿದ್ದು ಇದನ್ನೇ. ಅವರು ಕೆಲ ಮೂಲಭೂತ ನಿಯಮಗಳಿಗೆ ಒಪ್ಪಿಗೆ ಸೂಚಿಸಿದರು. ಈ ನಿಯಮಗಳೇ ಅಂತಿಮ ಹಾಗೂ ಯಾವುದೇ ಸರ್ಕಾರವು ಇವುಗಳನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲ ಎಂಬುದನ್ನು ಸಹ ಅವರು ಒಪ್ಪಿಕೊಂಡರು. ಈ ಮೂಲಭೂತ ನಿಯಮಗಳ ಸಂಕಲನವನ್ನು ಸಂವಿಧಾನವೆಂದು ಕರೆಯಲಾಗಿದೆ.

### ಕಾರ್ಯ ಚಟುವಟಿಕೆ

**ನಿಮ್ಮ ಪ್ರದೇಶದ ಕ್ಲಬ್ ಅಥವಾ ಸಹಕಾರಿ ಸಂಘ ಅಥವಾ ಸಂಘಟನೆ ಅಥವಾ ರಾಜಕೀಯ ಪಕ್ಷವನ್ನು ಭೇಟಿ ಮಾಡಿ. ಅವರ ನಿಯಮ ಪುಸ್ತಕದ (ಕೆಲವೊಮ್ಮೆ ಇದನ್ನು ಸಂಘಟನೆಯ ನಿಯಮಗಳು ಎಂದು ಕರೆಯಲಾಗುತ್ತದೆ) ಪ್ರತಿಯನ್ನು ಪಡೆದು ಓದಿರಿ. ಈ ನಿಯಮಗಳು ಪ್ರಜಾಪ್ರಭುತ್ವದ ತತ್ತ್ವಗಳಿಗೆ ಅನುಗುಣವಾಗಿ ಇವೆಯೇ? ಯಾವುದೇ ತಾರತಮ್ಯವಿಲ್ಲದಂತೆ ಯಾವುದೇ ವ್ಯಕ್ತಿಗಾದರೂ ಇವು ಸದಸ್ಯತ್ವ ನೀಡುತ್ತವೆಯೇ?**

ಸಂವಿಧಾನ ರಚನೆ ದಕ್ಷಿಣ ಆಫ್ರಿಕಾದ ಪಾಲಿಗೆ ವಿಶಿಷ್ಟವಾದುದೇನೂ ಅಲ್ಲ. ಪ್ರತಿ ದೇಶವೂ ವಿವಿಧ ಪಂಗಡಗಳಿಗೆ ಸೇರಿದ ಜನರನ್ನು ಹೊಂದಿದೆ. ಆದರೆ ಅವರ ಸಂಬಂಧವು ದಕ್ಷಿಣ ಆಫ್ರಿಕಾದ ಬಿಳಿಯರು ಮತ್ತು ಕರಿಯರ ನಡುವಿನ ಸಂಬಂಧದಷ್ಟು ಹದಗೆಟ್ಟಿರದು. ಆದರೆ ವಿಶ್ವದಾದ್ಯಂತ ಜನರ ನಡುವೆ ಅಭಿಪ್ರಾಯ ಮತ್ತು ಹಿತಾಸಕ್ತಿಗಳ ಭೇದವಿದೆ. ಪ್ರಜಾತಾಂತ್ರಿಕವಾಗಿರಲಿ ಅಥವಾ ಇಲ್ಲದೆ ಇರಲಿ, ವಿಶ್ವದ ಹೆಚ್ಚಿನ ರಾಷ್ಟ್ರಗಳು ಈ ಮೂಲಭೂತ ನಿಯಮಗಳನ್ನು ಹೊಂದಿರುವುದು ಅವಶ್ಯ. ಇದು ಸರ್ಕಾರಗಳಿಗೆ ಮಾತ್ರ ಅನ್ವಯವಾಗುವುದಿಲ್ಲ. ಪ್ರತಿ ಸಂಘಟನೆಗೂ ತನ್ನದೇ ಆದ ಸಂವಿಧಾನದ ಅಗತ್ಯವಿರುತ್ತದೆ. ನಿಮ್ಮ ಪ್ರದೇಶದಲ್ಲಿನ ಕ್ಲಬ್ ಆಗಿರಲಿ, ಸಹಕಾರಿ ಸಂಸ್ಥೆಯಾಗಿರಲಿ ಅಥವಾ ರಾಜಕೀಯ ಪಕ್ಷವಾಗಿರಲಿ, ಎಲ್ಲವುಗಳಿಗೂ ಸಂವಿಧಾನವು ಅವಶ್ಯ.

ಹೀಗೆ, ದೇಶದ ಸಂವಿಧಾನವು; ಆ ದೇಶದಲ್ಲಿ ಒಟ್ಟಿಗೆ ವಾಸಿಸುವ ಎಲ್ಲಾ ಜನರು ಸ್ವೀಕರಿಸಿರುವ ಲಿಖಿತ ನಿಯಮಗಳ ಸಂಕಲನವಾಗಿದೆ. ಸಂವಿಧಾನವು, ಒಂದು ನಿರ್ದಿಷ್ಟ ಗಡಿಯೊಳಗೆ ವಾಸಿಸುವ ಜನರ (ನಾಗರಿಕರೆಂದು ಕರೆಯಲ್ಪಡುವ) ನಡುವಿನ ಸಂಬಂಧ ಮತ್ತು ಜನರು ಹಾಗೂ ಸರ್ಕಾರದ ನಡುವಿನ ಸಂಬಂಧವನ್ನು ನಿರ್ಣಯಿಸುವ ಕಾನೂನು. ಸಂವಿಧಾನವು ಅನೇಕ ಕೆಲಸಗಳನ್ನು ಮಾಡುತ್ತದೆ:



ಇದು ಸರಿಯಲ್ಲ! ಎಲ್ಲಾ ಮೂಲಭೂತ ಅಂಶಗಳನ್ನು ಈಗಾಗಲೇ ನಿರ್ಧರಿಸಿದ್ದರೆ ಭಾರತದಲ್ಲಿ ಸಾಂವಿಧಾನಿಕ ಸಭೆಯನ್ನು ಹೊಂದುವ ಅಗತ್ಯವೇನಿತ್ತು?



**ವಲ್ಲಭಭಾಯಿ ಝವೇರ್ ಭಾಯಿ ಪಟೇಲ್ (1875–1950)**

ಜನ್ಮಸ್ಥಳ: ಗುಜರಾತ್

ಹಂಗಾಮಿ ಸರ್ಕಾರದಲ್ಲಿ ಗೃಹ, ಮಾಹಿತಿ ಮತ್ತು ಪ್ರಸಾರ ಸಚಿವರು. ಬಾರ್ದೋಲಿ ರೈತ ಸತ್ಯಾಗ್ರಹದ ವಕೀಲರು ಮತ್ತು ನಾಯಕರು. ಭಾರತದಲ್ಲಿ ರಾಜಾಡಳಿತವನ್ನು ಹೊಂದಿದ್ದ ರಾಜ್ಯಗಳ ಏಕೀಕರಣದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿದ್ದರು. ನಂತರ: ಉಪ ಪ್ರಧಾನ ಮಂತ್ರಿ.



**ಅಬುಲ್ ಕಲಂ ಆಜಾದ್ (1888–1958)**

ಜನ್ಮಸ್ಥಳ: ಸೌದಿ ಅರೇಬಿಯಾ

ಶಿಕ್ಷಣ ತಜ್ಞರು, ಲೇಖಕರು ಮತ್ತು ತತ್ವಜ್ಞಾನಿಗಳು; ಅರೇಬಿಕ್ ಪಂಡಿತರು. ರಾಷ್ಟ್ರೀಯ ಚಳವಳಿಯಲ್ಲಿ ಕ್ರಿಯಾಶೀಲರಾಗಿದ್ದ ಕಾಂಗ್ರೆಸ್ ನಾಯಕರು. ಮುಸ್ಲಿಂ ಪ್ರತ್ಯೇಕತಾವಾದಿ ರಾಜಕೀಯವನ್ನು ವಿರೋಧಿಸಿದರು. ನಂತರ: ಮೊದಲ ಕೇಂದ್ರ ಸಂಪುಟದಲ್ಲಿ ಶಿಕ್ಷಣ ಸಚಿವರು.



**ಟಿ.ಟಿ. ಕೃಷ್ಣಮಾಚಾರಿ (1899–1974)**

ಜನ್ಮಸ್ಥಳ: ತಮಿಳುನಾಡು

ಕರಡು ಸಮಿತಿ ಸದಸ್ಯರು. ಉದ್ಯಮಿ ಮತ್ತು ಕಾಂಗ್ರೆಸ್ ನಾಯಕರು.

ನಂತರ: ಕೇಂದ್ರ ಸಂಪುಟದಲ್ಲಿ ಹಣಕಾಸು ಸಚಿವರು.

- ಮೊದಲಿಗೆ ಇದು, ವಿವಿಧ ವರ್ಗಗಳ ಜನರು ಒಟ್ಟಿಗೆ ವಾಸಿಸಲು ಅಗತ್ಯವಿರುವ ನಂಬಿಕೆ ಮತ್ತು ಹೊಂದಾಣಿಕೆಯ ಮಟ್ಟವನ್ನು ಅಸ್ತಿತ್ವಕ್ಕೆ ತರುತ್ತದೆ;
- ಎರಡನೆಯದಾಗಿ, ಹೇಗೆ ಸರ್ಕಾರವನ್ನು ರೂಪಿಸಬೇಕು ಮತ್ತು ಯಾರಿಗೆ ಯಾವ ನಿರ್ಧಾರವನ್ನು ತೆಗೆದುಕೊಳ್ಳಲು ಅಧಿಕಾರ ಇರುತ್ತದೆ ಎನ್ನುವುದನ್ನು ಇದು ಸ್ಪಷ್ಟಪಡಿಸುತ್ತದೆ;
- ಮೂರನೆಯದಾಗಿ, ಇದು ಸರ್ಕಾರದ ಅಧಿಕಾರಗಳನ್ನು ಪರಿಮಿತಗೊಳಿಸುತ್ತದೆ ಮತ್ತು ನಾಗರಿಕರ ಹಕ್ಕುಗಳೇನು ಎಂಬುದನ್ನು ನಮಗೆ ತಿಳಿಸುತ್ತದೆ; ಮತ್ತು
- ನಾಲ್ಕನೆಯದಾಗಿ, ಉತ್ತಮ ಸಮಾಜವೊಂದನ್ನು ರೂಪಿಸಲು ಜನರಲ್ಲಿ ಇರುವ ಅಭಿಲಾಷೆಗಳನ್ನು ಇದು ವ್ಯಕ್ತಪಡಿಸುತ್ತದೆ.

ಸಂವಿಧಾನವನ್ನು ಹೊಂದಿರುವ ಎಲ್ಲ ರಾಷ್ಟ್ರಗಳು ಪ್ರಜಾತಾಂತ್ರಿಕ ವ್ಯವಸ್ಥೆಯನ್ನು ಹೊಂದಿರಬೇಕಾಗಿಲ್ಲ. ಆದರೆ ಪ್ರಜಾತಾಂತ್ರಿಕವಾಗಿರುವ ಎಲ್ಲಾ ರಾಷ್ಟ್ರಗಳು ಸಂವಿಧಾನವನ್ನು ಹೊಂದಿರುತ್ತವೆ. ಗ್ರೇಟ್ ಬ್ರಿಟನ್ ವಿರುದ್ಧ ಸ್ವಾತಂತ್ರ್ಯ ಸಂಗ್ರಾಮ ನಡೆಸಿದ ನಂತರ ಅಮೆರಿಕನ್ನರು ತಮ್ಮದೇ ಆದ ಸಂವಿಧಾನವನ್ನು ರೂಪಿಸಿದರು. ಕ್ರಾಂತಿಯ ನಂತರ ಫ್ರೆಂಚರು ಪ್ರಜಾತಾಂತ್ರಿಕ ಸಂವಿಧಾನವನ್ನು ಅಂಗೀಕರಿಸಿದರು. ಅಲ್ಲಿಂದೀಚೆಗೆ, ಎಲ್ಲ ಪ್ರಜಾಪ್ರಭುತ್ವಗಳು ಲಿಖಿತ ಸಂವಿಧಾನವನ್ನು ಹೊಂದುವುದು ರೂಢಿಯಾಗಿದೆ.

## 3.3 ಭಾರತದ ಸಂವಿಧಾನ ರಚನೆ

ದಕ್ಷಿಣ ಆಫ್ರಿಕಾದಂತೆಯೇ, ಭಾರತದ ಸಂವಿಧಾನವೂ ಅತ್ಯಂತ ಕಠಿಣ ಸಂದರ್ಭಗಳಲ್ಲಿ ರೂಪುಗೊಂಡಿದೆ. ಬಹು ದೊಡ್ಡ ಮತ್ತು ವೈವಿಧ್ಯತೆಯಿಂದ ಕೂಡಿದ ಭಾರತದಂತಹ ದೇಶವೊಂದಕ್ಕೆ ಸಂವಿಧಾನವನ್ನು ರಚಿಸುವುದು ಸುಲಭದ ಕೆಲಸವಲ್ಲ. ಆ ಸಂದರ್ಭದಲ್ಲಿ ಜನರು, ಆಳ್ವಿಕೆಗೆ ಒಳಪಟ್ಟಿದ್ದ ಸ್ಥಿತಿಯಿಂದ ನಗರದ ಹಕ್ಕುಗಳನ್ನು ಪಡೆದಿರುವ ಸ್ವತಂತ್ರ ನಿವಾಸಿಗಳಾಗಿ ಬದಲಾಗುತ್ತಿದ್ದರು. ಧಾರ್ಮಿಕ ಭಿನ್ನಾಭಿಪ್ರಾಯಗಳ ಕಾರಣ, ದೇಶವು ವಿಭಜನೆಯ ಮೂಲಕ ಉದಯವಾಯಿತು. ಇದು ಭಾರತ ಮತ್ತು ಪಾಕಿಸ್ತಾನದ ಜನರಿಗೆ ಆಘಾತಕಾರಿ ಅನುಭವವಾಗಿತ್ತು.

### ಕಾರ್ಯ ಚಟುವಟಿಕೆ

**ನಿಮ್ಮ ಅಜ್ಜ-ಅಜ್ಜಿ ಅಥವಾ ನಿಮ್ಮ ಪ್ರದೇಶದ ಇತರೆ ಹಿರಿಯರೊಡನೆ ಮಾತನಾಡಿ. ದೇಶದ ವಿಭಜನೆ, ಸ್ವಾತಂತ್ರ್ಯ ಅಥವಾ ಸಂವಿಧಾನ ರಚನೆಯ ಕುರಿತು ಅವರಿಗೆ ಏನಾದರೂ ನೆನಪಿದೆಯೇ ಎಂಬುದನ್ನು ಕೇಳಿ. ಆ ಸಂದರ್ಭದಲ್ಲಿ ಅವರಿಗೆ ದೇಶದ ಕುರಿತು ಇದ್ದ ಭೀತಿ ಮತ್ತು ಆಶೋತ್ತರಗಳು ಯಾವುವು? ತರಗತಿಯಲ್ಲಿ ಇವನ್ನು ಚರ್ಚಿಸಿ.**

ದೇಶ ವಿಭಜನೆಗೆ ಸಂಬಂಧಿಸಿದ ಹಿಂಸಾಚಾರದಲ್ಲಿ ಗಡಿಯ ಎರಡೂ ಕಡೆಗಳಲ್ಲಿ ಕನಿಷ್ಠ ಹತ್ತು ಲಕ್ಷ ಜನರು ಕೊಲ್ಲಲ್ಪಟ್ಟರು. ಅಲ್ಲಿ ಇನ್ನೊಂದು ಸಮಸ್ಯೆ ಇತ್ತು. ಭಾರತ ಅಥವಾ ಪಾಕಿಸ್ತಾನದ ಜೊತೆ ತಮ್ಮ ಸಂಸ್ಥಾನಗಳನ್ನು ವಿಲೀನಗೊಳಿಸುವ ಅಥವಾ ಸ್ವತಂತ್ರವಾಗಿ ಉಳಿಯುವ ಅಧಿಕಾರವನ್ನು ಬ್ರಿಟಿಷರು ಇಲ್ಲಿನ ಸಂಸ್ಥಾನಗಳ ರಾಜರಿಗೆ ನೀಡಿದ್ದರು. ಈ ರಾಜಾಡಳಿತದ ಸಂಸ್ಥಾನಗಳ ವಿಲೀನವು ಕಠಿಣಕರ ಮತ್ತು ಅನಿಶ್ಚಿತತೆಯ ಕೆಲಸವಾಗಿತ್ತು. ದೇಶದ ಸಂವಿಧಾನವನ್ನು ಬರೆದಾಗ, ಭಾರತದ ಭವಿಷ್ಯವು ಈಗಿರುವಂತೆ ಭದ್ರವಾಗಿ ಕಾಣಿಸಲಿಲ್ಲ. ದೇಶದ ಪ್ರಸ್ತುತ ಹಾಗೂ ಭವಿಷ್ಯದ ಕುರಿತು ಸಂವಿಧಾನದ ನಿರ್ಮಾತೃಗಳಿಗೆ ಆತಂಕಗಳಿದ್ದವು.

### ಸಂವಿಧಾನದ ಹಾದಿ

ಈ ಎಲ್ಲಾ ಸವಾಲುಗಳ ನಡುವೆಯೂ ಭಾರತೀಯ ಸಂವಿಧಾನದ ನಿರ್ಮಾತೃಗಳಿಗೆ ಒಂದು ಅನುಕೂಲತೆ ಇತ್ತು. ದಕ್ಷಿಣ ಆಫ್ರಿಕಾದಂತೆ ಇಲ್ಲಿ ಅವರಿಗೆ ಪ್ರಜಾಸತ್ತಾತ್ಮಕ ಭಾರತವು ಹೇಗಿರಬೇಕು ಎಂಬ ಕುರಿತು ಒಮ್ಮತವನ್ನು ಮೂಡಿಸುವ ಅಗತ್ಯವಿರಲಿಲ್ಲ. ಈ ಒಮ್ಮತವು ಸ್ವಾತಂತ್ರ್ಯ ಹೋರಾಟದ ವೇಳೆಗೆ ಅಧಿಕ ಪ್ರಮಾಣದಲ್ಲಿ ರೂಪುಗೊಂಡಿತು. ನಮ್ಮ ರಾಷ್ಟ್ರೀಯ ಚಳವಳಿಯು ವಿದೇಶಿ ಆಳ್ವಿಕೆಯ ವಿರುದ್ಧದ ಹೋರಾಟ ಮಾತ್ರವೇ ಆಗಿರಲಿಲ್ಲ. ಅದು ನಮ್ಮ ದೇಶದ ಪುನಶ್ಚೇತನ ಮತ್ತು ನಮ್ಮ ಸಮಾಜ ಮತ್ತು ರಾಜಕಾರಣದ ರೂಪಾಂತರದ ಹೋರಾಟವೂ ಆಗಿತ್ತು. ಸ್ವಾತಂತ್ರ್ಯ ಪಡೆದ ನಂತರ ಯಾವ ಹಾದಿಯನ್ನು

ಭಾರತವು ಕ್ರಮಿಸಬೇಕು ಎನ್ನುವ ಕುರಿತು ಸ್ವಾತಂತ್ರ್ಯ ಸಂಗ್ರಾಮದೊಳಗೆ ತೀಕ್ಷ್ಣ ಭಿನ್ನಾಭಿಪ್ರಾಯಗಳಿದ್ದವು. ಇಂತಹ ಭಿನ್ನಾಭಿಪ್ರಾಯಗಳು ಇಂದಿಗೂ ಇವೆ. ಆದಾಗ್ಯೂ, ಬಹುತೇಕ ಎಲ್ಲರೂ ಒಪ್ಪಿಕೊಳ್ಳುವ ಕೆಲವು ಮೂಲಭೂತ ಕಲ್ಪನೆಗಳು ರೂಪುಗೊಂಡವು.

ಈ ಹಿಂದೆ 1928ರಲ್ಲಿಯೇ ಮೋತಿಲಾಲ್ ನೆಹರು ಮತ್ತು ಎಂಟು ಮಂದಿ ಇತರ ಕಾಂಗ್ರೆಸ್ ನಾಯಕರು ಭಾರತಕ್ಕಾಗಿ ಸಂವಿಧಾನವನ್ನು ರೂಪಿಸಿದ್ದರು. 1931ರಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ನ ಕರಾಚಿ ಅಧಿವೇಶನದ ಸಂಕಲ್ಪವು ಸ್ವತಂತ್ರ ಭಾರತದ ಸಂವಿಧಾನವು ಹೇಗಿರಬೇಕು ಎಂಬ ಕುರಿತು ಚಿಂತನೆ ನಡೆಸಿತು. ಈ ಎರಡೂ ದಾಖಲೆಗಳು, ಸ್ವತಂತ್ರ ಭಾರತದ ಸಂವಿಧಾನದಲ್ಲಿ ಸಾರ್ವತ್ರಿಕ ವಯಸ್ಕ ಮತದಾನ, ಸ್ವಾತಂತ್ರ್ಯ ಮತ್ತು ಸಮಾನತೆಯ ಹಕ್ಕಿನ ಅಳವಡಿಕೆಗೆ ಮತ್ತು ಅಲ್ಪಸಂಖ್ಯಾತರ ಹಕ್ಕುಗಳ ರಕ್ಷಣೆಗೆ ಬದ್ಧವಾಗಿದ್ದವು. ಹೀಗೆ, ಸಂವಿಧಾನದ ಕುರಿತು ಚರ್ಚಿಸಲು, ಸಾಂವಿಧಾನಿಕ ಸಭೆಯು ಸಭೆ ಸೇರುವ ಮೊದಲೇ ಎಲ್ಲ ನಾಯಕರು ಕೆಲ ಮೂಲಭೂತ ಮೌಲ್ಯಗಳನ್ನು ಸ್ವೀಕರಿಸಿದ್ದರು.

ವಸಾಹತುಶಾಹಿ ಆಳ್ವಿಕೆಯ ರಾಜಕೀಯ ಸಂಸ್ಥೆಗಳ ನಿಕಟ ಪರಿಚಯವು ಸಾಂಸ್ಥಿಕ ವಿನ್ಯಾಸವನ್ನು ಕುರಿತ ಒಪ್ಪಂದವನ್ನು ರೂಪಿಸಲು ಸಹ ಸಹಕಾರಿಯಾಯಿತು. ಬ್ರಿಟಿಷ್ ಆಳ್ವಿಕೆಯು ಕೆಲವೇ ಜನರಿಗೆ ಮತದಾನದ ಹಕ್ಕನ್ನು ನೀಡಿತ್ತು. ಈ ಆಧಾರದಲ್ಲಿ ಬ್ರಿಟಿಷರು ಅತ್ಯಂತ ದುರ್ಬಲ ಶಾಸಕಾಂಗವನ್ನು ಜಾರಿಗೆ ತಂದಿದ್ದರು. ಬ್ರಿಟಿಷ್ ಭಾರತದ ಪ್ರಾಂತೀಯ ಶಾಸನಸಭೆಗಳಿಗೆ ಮತ್ತು ಸಚಿವಾಲಯಗಳಿಗೆ 1937ರಲ್ಲಿ ಚುನಾವಣೆಗಳು ನಡೆದವು. ಇವುಗಳು ಸಂಪೂರ್ಣವಾಗಿ ಪ್ರಜಾಸತ್ತಾತ್ಮಕ ಸರ್ಕಾರಗಳಾಗಿರಲಿಲ್ಲ. ಆದರೆ, ಈ ಶಾಸನ ಸಂಸ್ಥೆಗಳ ಜೊತೆ ಕೆಲಸ ಮಾಡುವಾಗ ಭಾರತೀಯರಿಗೆ ದೊರೆತ ಅನುಭವವು; ತನ್ನ ಸ್ವಂತ ಸಂಸ್ಥೆಗಳನ್ನು ರೂಪಿಸುವ ಮತ್ತು ಅವುಗಳನ್ನು ನಿರ್ವಹಿಸುವ ನಿಟ್ಟಿನಲ್ಲಿ ದೇಶದ ಪಾಲಿಗೆ ಸಾಕಷ್ಟು ಸಹಕಾರಿಯಾಯಿತು. ಹೀಗಾಗಿಯೇ ಭಾರತೀಯ ಸಂವಿಧಾನವು 1935ರ ಭಾರತ ಸರ್ಕಾರದ ಕಾಯಿದೆಯಂತಹ ವಸಾಹತುಶಾಹಿ ಕಾನೂನುಗಳ ಅನೇಕ ಸಾಂಸ್ಥಿಕ ವಿವರಗಳು ಮತ್ತು ವಿಧಾನಗಳನ್ನು ಅಳವಡಿಸಿಕೊಂಡಿದೆ.

### ಕಾರ್ಯ ಚಟುವಟಿಕೆ

**ಇಲ್ಲಿ ಉಲ್ಲೇಖಿಸದೆ ಇರುವ ನಿಮ್ಮ ರಾಜ್ಯದ ಅಥವಾ ಪ್ರಾಂತ್ಯದ ಯಾವುದೇ ಸಾಂವಿಧಾನಿಕ ಸಭೆಯ ಸದಸ್ಯರನ್ನು ಗೊತ್ತು ಹಚ್ಚಿ. ಆ ನಾಯಕನ ಭಾವಚಿತ್ರ ಸಂಗ್ರಹಿಸಿ ಅಥವಾ ಆ ನಾಯಕನ ರೇಖಾಚಿತ್ರವನ್ನು ಬಿಡಿಸಿ. ಇಲ್ಲಿ ಬಳಸಿರುವ ಶೈಲಿಯನ್ನೇ ಅನುಸರಿಸಿ ಅವರ ಮೇಲೆ ಕಿರಿದಾದ ಟಿಪ್ಪಣಿ ಬರೆಯಿರಿ: ಹೆಸರು (ಹುಟ್ಟಿದ ವರ್ಷ-ಮೃತರಾದ ವರ್ಷ), ಹುಟ್ಟಿದ ಸ್ಥಳ (ಈಗಿನ ರಾಜಕೀಯ ಗಡಿಗಳಿಗೆ ಅನುಗುಣವಾಗಿ), ರಾಜಕೀಯ ಚಟುವಟಿಕೆಗಳ ಕುರಿತು ಸಂಕ್ಷಿಪ್ತ ವಿವರಣೆ; ಸಾಂವಿಧಾನಿಕ ಸಭೆಯ ನಂತರ ವಹಿಸಿದ ಪಾತ್ರ.**

ಸಂವಿಧಾನದ ಚೌಕಟ್ಟಿನ ಕುರಿತ ಅನೇಕ ವರ್ಷಗಳ ಚಿಂತನೆ ಮತ್ತು ಚರ್ಚೆಯು ಇನ್ನೊಂದು ಲಾಭವನ್ನು ಒದಗಿಸಿತು. ನಮ್ಮ ನಾಯಕರು ತಮ್ಮದೇ ಆದ ಪರಿಮಿತಿಯಲ್ಲಿ ಇತರ ದೇಶಗಳಿಂದ ಜ್ಞಾನವನ್ನು ಸಂಪಾದಿಸಲು ಆತ್ಮವಿಶ್ವಾಸವನ್ನು ಪಡೆದರು. ನಮ್ಮ ಅನೇಕ ನಾಯಕರು ಫ್ರೆಂಚ್ ಕ್ರಾಂತಿ, ಬ್ರಿಟನ್ನಿನ ಸಂಸದೀಯ ಪ್ರಜಾತಂತ್ರ ವ್ಯವಸ್ಥೆ ಮತ್ತು ಅಮೆರಿಕದ ಹಕ್ಕುಗಳ ಮಸೂದೆಯಿಂದ ಪ್ರೇರಿತರಾದರು. ರಷ್ಯಾದ ಸಮಾಜವಾದಿ ಕ್ರಾಂತಿಯು, ನಮ್ಮ ದೇಶದ ವ್ಯವಸ್ಥೆಯನ್ನು ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯ ತಳಹದಿಯ ಮೇಲೆ ರೂಪಿಸುವ ನಿಟ್ಟಿನ ಚಿಂತನೆಯಲ್ಲಿ ತೊಡಗುವಂತೆ ಅನೇಕ ಭಾರತೀಯರನ್ನು ಪ್ರೇರೇಪಿಸಿತು. ಆದರೂ, ಇತರರು ಮಾಡಿದ್ದನ್ನು ಅವರು ನೇರವಾಗಿ ನಕಲು ಮಾಡಲಿಲ್ಲ. ಈ ಅಂಶಗಳು ನಮ್ಮ ದೇಶಕ್ಕೆ ಸರಿಹೊಂದುತ್ತವೆಯೆ ಎಂಬುದನ್ನು ಅವರು ಪ್ರತಿ ಹಂತದಲ್ಲಿ ಪ್ರಶ್ನಿಸುತ್ತಿದ್ದರು. ನಮ್ಮ ದೇಶದ ಸಂವಿಧಾನದ ರಚನೆಗೆ ಈ ಎಲ್ಲ ಅಂಶಗಳು ತಮ್ಮದೇ ಆದ ಕೊಡುಗೆಯನ್ನು ನೀಡಿದವು.

## ಸಾಂವಿಧಾನಿಕ ಸಭೆ

ಆ ಸಂದರ್ಭದಲ್ಲಿ ಭಾರತೀಯ ಸಂವಿಧಾನದ ರಚನಾಕಾರರು ಯಾರಾಗಿದ್ದರು? ಸಂವಿಧಾನ ರಚನೆಯಲ್ಲಿ ಪ್ರಮುಖ ಪಾತ್ರ ವಹಿಸಿದ ನಾಯಕರ ಕುರಿತು ನೀವಿಲ್ಲಿ ಸಂಕ್ಷಿಪ್ತವಾಗಿ ತಿಳಿದುಕೊಳ್ಳಲಿದ್ದೀರಿ.

ಚುನಾಯಿತ ಪ್ರತಿನಿಧಿಗಳ ಸಭೆಯಾದ ಸಾಂವಿಧಾನಿಕ ಸಭೆಯು ಸಂವಿಧಾನವೆಂಬ ದಸ್ತಾವೇಜಿನ ಕರಡನ್ನು ರಚಿಸಿತು. ಅದರ ಚುನಾವಣೆಯನ್ನು 1946ರ ಜುಲೈ ತಿಂಗಳಿನಲ್ಲಿ ನಡೆಸಲಾಯಿತು. ಇದರ ಮೊದಲ ಸಭೆಯು 1946ರ ಡಿಸೆಂಬರ್ ತಿಂಗಳಿನಲ್ಲಿ ಆಯೋಜಿಸಲ್ಪಟ್ಟಿತು. ಕೆಲವೇ ಸಮಯದ ನಂತರ, ದೇಶವನ್ನು ಭಾರತ ಮತ್ತು ಪಾಕಿಸ್ತಾನವಾಗಿ ವಿಭಜಿಸಲಾಯಿತು. ಸಾಂವಿಧಾನಿಕ ಸಭೆಯನ್ನು ಸಹ ಭಾರತದ ಸಾಂವಿಧಾನಿಕ ಸಭೆ ಮತ್ತು ಪಾಕಿಸ್ತಾನದ ಸಾಂವಿಧಾನಿಕ ಸಭೆಯಾಗಿ ವಿಂಗಡಿಸಲಾಯಿತು. ಭಾರತದ ಸಂವಿಧಾನವನ್ನು



**ರಾಜೇಂದ್ರ ಪ್ರಸಾದ್** (1884–1963)
ಜನ್ಮಸ್ಥಳ: ಬಿಹಾರ
ಸಾಂವಿಧಾನಿಕ ಸಭೆಯ ಅಧ್ಯಕ್ಷರು, ವಕೀಲರು, ಚಂಪಾರಣ್ಯ ಸತ್ಯಾಗ್ರಹದಲ್ಲಿ ವಹಿಸಿದ್ದ ಪಾತ್ರಕ್ಕಾಗಿ ಹೆಸರುವಾಸಿ. ಮೂರು ಬಾರಿ ಕಾಂಗ್ರೆಸ್ ಅಧ್ಯಕ್ಷರು. ನಂತರ: ಭಾರತದ ಮೊದಲ ರಾಷ್ಟ್ರಪತಿ.



**ಜೈಪಾಲ್ ಸಿಂಗ್** (1903–1970)
ಜನ್ಮಸ್ಥಳ: ಜಾರ್ಖಂಡ್
ಕ್ರೀಡಾಳು ಮತ್ತು ಶಿಕ್ಷಣತಜ್ಞ. ಮೊದಲ ರಾಷ್ಟ್ರೀಯ ಹಾಕಿ ತಂಡದ ಕಪ್ತಾನ. ಆದಿವಾಸಿ ಮಹಾಸಭಾದ ಸ್ಥಾಪಕ ಅಧ್ಯಕ್ಷ.
ನಂತರ: ಜಾರ್ಖಂಡ್ ಪಕ್ಷದ ಸ್ಥಾಪಕ.



**ಎಚ್.ಸಿ. ಮುಖರ್ಜಿ** (1887–1956)
ಜನ್ಮಸ್ಥಳ: ಬಂಗಾಳ
ಸಾಂವಿಧಾನಿಕ ಸಭೆಯ ಉಪಾಧ್ಯಕ್ಷರು. ಹೆಸರಾಂತ ಲೇಖಕ ಮತ್ತು ಶಿಕ್ಷಣತಜ್ಞ. ಕಾಂಗ್ರೆಸ್ ನಾಯಕ. ಅಖಿಲ ಭಾರತ ಕ್ರೈಸ್ತ ಪರಿಷತ್ತಿನ ಮತ್ತು ಬಂಗಾಲ ವಿಧಾನಸಭೆಯ ಸದಸ್ಯರು. ನಂತರ: ಪಶ್ಚಿಮ ಬಂಗಾಳದ ರಾಜ್ಯಪಾಲರು.

ಬರೆದ ಸಾಂವಿಧಾನಿಕ ಸಭೆಯು 299 ಸದಸ್ಯರನ್ನು ಹೊಂದಿತ್ತು. ಸಭೆಯು ಸಂವಿಧಾನವನ್ನು 1949ರ ನವೆಂಬರ್ 26ರಂದು ಅಳವಡಿಸಿತಾದರೂ, ಇದು ಜಾರಿಗೆ ಬಂದದ್ದು 1950ರ ಜನವರಿ 26ರಂದು. ಈ ದಿನದ ಕುರುಹಾಗಿ ನಾವು ಪ್ರತಿ ವರ್ಷ ಜನವರಿ 26ರಂದು 'ಗಣರಾಜ್ಯೋತ್ಸವ'ವನ್ನು ಆಚರಿಸುತ್ತೇವೆ.



**ಜಿ. ದುರ್ಗಾಭಾಯಿ ದೇಶ್ ಮುಖ್** (1909–1981)
ಜನ್ಮಸ್ಥಳ: ಆಂಧ್ರ ಪ್ರದೇಶ
ವಕೀಲರು ಮತ್ತು ಮಹಿಳಾ ವಿಮೋಚನೆಯ ಪ್ರತಿಪಾದಕರು ಹಾಗೂ ಸಾರ್ವಜನಿಕ ಕಾರ್ಯಕರ್ತರು
ಆಂಧ್ರ ಮಹಿಳಾ ಸಭಾದ ಸಂಸ್ಥಾಪಕರು; ಕಾಂಗ್ರೆಸ್ ನಾಯಕರು.
ನಂತರ: ಕೇಂದ್ರ ಸಾಮಾಜಿಕ ಕಲ್ಯಾಣ ಮಂಡಳಿಯ ಸ್ಥಾಪಕ ಅಧ್ಯಕ್ಷೆ.



**ಬಲದೇವ್ ಸಿಂಗ್** (1901–1961)
ಜನ್ಮಸ್ಥಳ: ಹರ್ಯಾಣ
ಯಶಸ್ವಿ ಉದ್ಯಮಿ ಮತ್ತು ಪಂಜಾಬ್ ವಿಧಾನಸಭೆಯ ಪಂಥಿಕ್ ಅಕಾಲಿ ಪಕ್ಷದ ನಾಯಕರು.
ಸಾಂವಿಧಾನಿಕ ಸಭೆಯಲ್ಲಿ ಕಾಂಗ್ರೆಸ್ಸಿನಿಂದ ನಾಮಕರಣಗೊಂಡಿದ್ದರು.
ನಂತರ: ಕೇಂದ್ರ ಸಂಪುಟದಲ್ಲಿ ರಕ್ಷಣಾ ಮಂತ್ರಿ.

ಐವತ್ತು ವರ್ಷಗಳಿಗಿಂತಲೂ ಮೊದಲು ಈ ಸಭೆಯು ರೂಪಿಸಿದ ಸಂವಿಧಾನವನ್ನು ನಾವು ಏಕೆ ಸ್ವೀಕರಿಸಬೇಕು? ನಾವು ಈಗಾಗಲೇ ಒಂದು ಕಾರಣವನ್ನು ಈ ಮೇಲೆ ಗಮನಿಸಿದ್ದೇವೆ. ಸಂವಿಧಾನವು ಇದರ ಸದಸ್ಯರ ಅಭಿಪ್ರಾಯಗಳನ್ನು ಮಾತ್ರ ಪ್ರತಿಧ್ವನಿಸುವುದಿಲ್ಲ. ಅದು ಆ ಸಮಯದ ವಿಸ್ತೃತ ಒಮ್ಮತವನ್ನು ವ್ಯಕ್ತಪಡಿಸುತ್ತದೆ. ವಿಶ್ವದ ಅನೇಕ ರಾಷ್ಟ್ರಗಳು ತಮ್ಮ ಸಂವಿಧಾನವನ್ನು ಹೊಸದಾಗಿ ಬರೆಯಬೇಕಾಯಿತು, ಏಕೆಂದರೆ– ಅವುಗಳ ಮೂಲಭೂತ ನಿಯಮಗಳು, ಎಲ್ಲ ಪ್ರಮುಖ ಸಾಮಾಜಿಕ ಪಂಗಡಗಳಿಗೆ ಅಥವಾ ರಾಜಕೀಯ ಪಕ್ಷಗಳಿಗೆ ಸ್ವೀಕಾರಾರ್ಹವಾಗಿರಲಿಲ್ಲ. ಇತರ ಕೆಲ ರಾಷ್ಟ್ರಗಳಲ್ಲಿ ಸಂವಿಧಾನವು ಕಾಗದದಲ್ಲಿ ಮಾತ್ರವೇ ಅಸ್ತಿತ್ವದಲ್ಲಿದೆ. ವಾಸ್ತವವಾಗಿ ಯಾರೂ ಇದನ್ನು ಪಾಲಿಸುವುದಿಲ್ಲ. ನಮ್ಮ ಸಂವಿಧಾನದ ಅನುಭವವೇ ಬೇರೆ. ಕಳೆದ ಅರ್ಧ ಶತಮಾನದಲ್ಲಿ ಅನೇಕ ಪಂಗಡಗಳು ಸಂವಿಧಾನದ ಕೆಲ ನಿಬಂಧನೆಗಳನ್ನು ಪ್ರಶ್ನಿಸಿವೆ. ಆದರೆ ಯಾವುದೇ ದೊಡ್ಡ ಸಾಮಾಜಿಕ ಪಂಗಡ ಅಥವಾ ರಾಜಕೀಯ ಪಕ್ಷವು ಸಂವಿಧಾನದ ಔಚಿತ್ಯವನ್ನು ಪ್ರಶ್ನಿಸಿಲ್ಲ. ಇದು ಯಾವುದೇ ಸಂವಿಧಾನದ ಪಾಲಿಗೆ ಒಂದು ಅಸಾಮಾನ್ಯ ಸಾಧನೆಯಾಗಿದೆ.

ಸಂವಿಧಾನವನ್ನು ಸ್ವೀಕರಿಸಲು ಇರುವ ಎರಡನೆಯ ಕಾರಣವೇನೆಂದರೆ, ಸಾಂವಿಧಾನಿಕ ಸಭೆಯು ಭಾರತದ ಜನರನ್ನು ಪ್ರತಿನಿಧಿಸುತ್ತಿತ್ತು. ಈ ಸಂದರ್ಭದಲ್ಲಿ ಸಾರ್ವತ್ರಿಕ ವಯಸ್ಕ ಮತದಾನವಿರಲಿಲ್ಲ. ಹೀಗಾಗಿ ಸಾಂವಿಧಾನಿಕ ಸಭೆಯನ್ನು ನೇರವಾಗಿ ಭಾರತದ ಎಲ್ಲ ಜನರು ಆರಿಸುವುದು ಸಾಧ್ಯವಿರಲಿಲ್ಲ. ನಾವು ಈ ಮೇಲೆ ತಿಳಿಸಿರುವಂತೆ, ಇದನ್ನು ಮುಖ್ಯವಾಗಿ, ಅಸ್ತಿತ್ವದಲ್ಲಿದ್ದ ಪ್ರಾಂತೀಯ ಶಾಸನ ಸಭೆಗಳ ಸದಸ್ಯರು ಚುನಾಯಿಸುತ್ತಿದ್ದರು. ಇದು ದೇಶದ ಎಲ್ಲ ಪ್ರಾಂತ್ಯಗಳ ಸದಸ್ಯರ ಭೌಗೋಳಿಕ ಪ್ರತಿನಿಧಿತ್ವವನ್ನು ಖಾತರಿಪಡಿಸಿತು. ಭಾರತದ ಸ್ವಾತಂತ್ರ್ಯ ಹೋರಾಟವನ್ನು ಮುನ್ನಡೆಸಿದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಈ ಸಭೆಯಲ್ಲಿ ಸಿಂಹಪಾಲು ಹೊಂದಿತ್ತು. ಆದರೆ ಕಾಂಗ್ರೆಸ್ ಪಕ್ಷವು ವಿವಿಧ ರಾಜಕೀಯ ಪಂಗಡಗಳು ಮತ್ತು ಅಭಿಪ್ರಾಯಗಳನ್ನು ಹೊಂದಿತ್ತು. ಕಾಂಗ್ರೆಸ್ ನೀತಿಗಳನ್ನು ಒಪ್ಪದೇ ಇದ್ದ ಅನೇಕ ಸದಸ್ಯರು ಸಭೆಯಲ್ಲಿದ್ದರು. ಸಾಮಾಜಿಕ ಸ್ತರದಲ್ಲಿಯೂ, ಈ ಸಭೆಯು ವಿವಿಧ ಭಾಷಾ ಪಂಗಡಗಳು, ಜಾತಿಗಳು, ವರ್ಗಗಳು, ಧರ್ಮಗಳು ಮತ್ತು ವೃತ್ತಿಗಳ ಸದಸ್ಯರನ್ನು ಪ್ರತಿನಿಧಿಸಿತು. ಒಂದು ವೇಳೆ ಸಾಂವಿಧಾನಿಕ ಸಭೆಯನ್ನು ಸಾರ್ವತ್ರಿಕ ವಯಸ್ಕ ಮತದಾನದ ಮೂಲಕ ಆರಿಸಿದ್ದರೂ, ಇದರ ಸಂಯೋಜನೆಯು ಹೆಚ್ಚು ಭಿನ್ನವಾಗಿ ಏನೂ ಇರುತ್ತಿರಲಿಲ್ಲ.

ಅಂತಿಮವಾಗಿ, ಸಾಂವಿಧಾನಿಕ ಸಭೆಯು ಕೆಲಸ ಮಾಡಿದ ರೀತಿಯು ಸಂವಿಧಾನಕ್ಕೆ ಗೌರವಾರ್ಹತೆಯನ್ನು ನೀಡುತ್ತದೆ. ಸಾಂವಿಧಾನಿಕ ಸಭೆಯು ವ್ಯವಸ್ಥಿತ, ಮುಕ್ತ ಮತ್ತು ಒಮ್ಮತದ ನಿಟ್ಟಿನಲ್ಲಿ ಕೆಲಸ ಮಾಡಿತು. ಮೊದಲಿಗೆ ಕೆಲವು ಮೂಲತತ್ತ್ವಗಳನ್ನು ನಿರ್ಧರಿಸಿ ಅವನ್ನು ಒಪ್ಪಿಕೊಳ್ಳಲಾಯಿತು. ಡಾ. ಬಿ.ಆರ್.ಅಂಬೇಡ್ಕರ್ ಅಧ್ಯಕ್ಷತೆ ವಹಿಸಿದ್ದ ಕರಡು ಸಮಿತಿ ಸಂವಿಧಾನದ ಕರಡನ್ನು ಚರ್ಚೆಗಾಗಿ ಸಿದ್ಧಪಡಿಸಿತು. ಕರಡು ಸಂವಿಧಾನವನ್ನು ಕುರಿತಂತೆ, ಪ್ರತಿ ಕಲಂನ ಬಗ್ಗೆ ವಿವಿಧ ಸುತ್ತಿನ ವಿಸ್ತೃತ ಚರ್ಚೆಗಳು ನಡೆದವು. ಒಟ್ಟು ಎರಡು ಸಾವಿರಕ್ಕೂ ಹೆಚ್ಚು ತಿದ್ದುಪಡಿಗಳನ್ನು ಪರಿಗಣಿಸಲಾಯಿತು. ಸದಸ್ಯರು ಮೂರು ವರ್ಷಗಳಲ್ಲಿ, 114 ದಿನಗಳ ಚರ್ಚೆ ನಡೆಸಿದರು. ಸಭೆಯಲ್ಲಿ ಪ್ರಸ್ತುತಪಡಿಸಿದ ಪ್ರತಿ ದಾಖಲೆ ಮತ್ತು ಆಡಿದ ಪ್ರತಿಯೊಂದು ಮಾತನ್ನು ದಾಖಲಿಸಿ, ಸಂರಕ್ಷಿಸಲಾಗಿದೆ. ಇವುಗಳನ್ನು 'ಸಾಂವಿಧಾನಿಕ ಸಭೆಯ ಚರ್ಚೆಗಳು' ಎಂದು ಕರೆಯಲಾಗಿದ್ದು; ಅವನ್ನು ಮುದ್ರಿಸಿದಾಗ, ಈ ಚರ್ಚೆಗಳ 12 ಬೃಹತ್ ಸಂಪುಟಗಳು ಹೊರಬಂದವು. ಈ ಚರ್ಚೆಗಳು ಸಂವಿಧಾನದ ಪ್ರತಿ ನಿಬಂಧನೆಯ ಹಿಂದಿನ ತಾರ್ಕಿಕತೆಯನ್ನು ತಿಳಿಸುತ್ತವೆ. ಇವುಗಳನ್ನು ಸಂವಿಧಾನದ ಅರ್ಥವನ್ನು ವಿವರಿಸಲು ಬಳಸಲಾಗುತ್ತದೆ.



**ನಿಮ್ಮ ಪ್ರಗತಿಯನ್ನು ಪರಿಶೀಲಿಸಿ**

**ಇಲ್ಲಿನ ಪಕ್ಕದ ಅಂಕಣದಲ್ಲಿ ಭಾರತ ಸಂವಿಧಾನದ ರಚನಾಕಾರರ ಕುರಿತು ನೀಡಿರುವ ಮಾಹಿತಿಯನ್ನು ಓದಿ. ಈ ಮಾಹಿತಿಯನ್ನು ನೀವು ನೆನಪಿಡುವ ಅಗತ್ಯವಿಲ್ಲ. ಈ ಕೆಳಗಿನ ಹೇಳಿಕೆಗಳನ್ನು ಸಮರ್ಥಿಸಲು ಉದಾಹರಣೆಗಳನ್ನು ನೀಡಿ:**

1. ಸಭೆಯು, ಕಾಂಗ್ರೆಸ್ಸಿನಲ್ಲಿ ಇಲ್ಲದ ಅನೇಕ ಸದಸ್ಯರನ್ನು ಹೊಂದಿತ್ತು.
2. ಸಭೆಯು ವಿವಿಧ ಸಾಮಾಜಿಕ ವರ್ಗಗಳ ಸದಸ್ಯರನ್ನು ಪ್ರತಿನಿಧಿಸಿತು.
3. ಸಭೆಯ ಸದಸ್ಯರು ವಿವಿಧ ಸಿದ್ಧಾಂತಗಳನ್ನು ನಂಬಿದ್ದರು.

# 3.4 ಭಾರತದ ಸಂವಿಧಾನದ ಮಾರ್ಗದರ್ಶಿ ಮೌಲ್ಯಗಳು

ಈ ಪುಸ್ತಕದಲ್ಲಿ ನಾವು ವಿವಿಧ ವಿಷಯಗಳ ಮೇಲಿನ ಸಂವಿಧಾನದ ನಿಖರ ನಿಬಂಧನೆಗಳ ಕುರಿತು ಅಧ್ಯಯನ ನಡೆಸಲಿದ್ದೇವೆ. ಈ ಹಂತದಲ್ಲಿ, ನಮ್ಮ ಸಂವಿಧಾನವು ಏನನ್ನು ಒಳಗೊಂಡಿದೆ ಎಂಬ ಸಮಗ್ರ ತತ್ತ್ವದ ಕುರಿತು ಅರ್ಥೈಸಿಕೊಳ್ಳಲು ಪ್ರಯತ್ನಿಸೋಣ. ಇದನ್ನು ನಾವು ಎರಡು ರೀತಿಯಲ್ಲಿ ಮಾಡಬಹುದು. ನಮ್ಮ ಸಂವಿಧಾನದ ಕುರಿತು ಪ್ರಮುಖ ನಾಯಕರು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಓದುವ ಮೂಲಕ ಇದನ್ನು ಅರ್ಥೈಸಿಕೊಳ್ಳಬಹುದು. ಆದರೆ ತನ್ನದೇ ತತ್ತ್ವದ ಕುರಿತು ಸಂವಿಧಾನ ಏನು ಹೇಳುತ್ತದೆ ಎನ್ನುವುದನ್ನು ಓದುವುದು ಸಹ ತೀರಾ ಅತ್ಯಗತ್ಯ. ಸಂವಿಧಾನದ ಪೀಠಿಕೆ ನಿರ್ವಹಿಸುವುದು ಇದನ್ನೇ. ಇವುಗಳನ್ನು ಕುರಿತಂತೆ ಒಂದೊಂದಾಗಿ ಗಮನ ಹರಿಸೋಣ.

### ಕನಸು ಮತ್ತು ಭರವಸೆ

ಸಂವಿಧಾನ ರಚನಾಕಾರರ ಸ್ಥೂಲಚಿತ್ರಣದಲ್ಲಿ ಒಬ್ಬರ ಹೆಸರು ಬಿಟ್ಟುಹೋಗಿರುವುದನ್ನು ನಿಮ್ಮಲ್ಲಿನ ಕೆಲವರು ಗಮನಿಸಿರಬಹುದು: ಅವರೇ ಮಹಾತ್ಮ ಗಾಂಧೀಜಿ. ಇವರು ಸಾಂವಿಧಾನಿಕ ಸಭೆಯ ಸದಸ್ಯರಾಗಿರಲಿಲ್ಲ. ಆದರೂ ಅನೇಕ ಸದಸ್ಯರು ಅವರ ಕಾಣ್ಕೆ(view)ಯನ್ನು ಅನುಸರಿಸಿದರು. ಅನೇಕ ವರ್ಷಗಳ ಹಿಂದೆ, ಅಂದರೆ 1931ರಲ್ಲಿ ತನ್ನ ನಿಯತಕಾಲಿಕೆಯಾದ 'ಯಂಗ್‌ಇಂಡಿಯಾ'ದಲ್ಲಿ ಅವರು ಸಂವಿಧಾನವು ಏನು ಮಾಡಬೇಕೆಂದು ತಾನು ಬಯಸುತ್ತೇನೆ ಎಂಬುದರ ಕುರಿತು ಬರೆದಿದ್ದರು:

*ದಾಸ್ಯ ಮತ್ತು ಅನುಗ್ರಹದಿಂದ ಭಾರತವನ್ನು ಬಿಡುಗಡೆಗೊಳಿಸುವ ಸಂವಿಧಾನಕ್ಕಾಗಿ ನಾನು ಶ್ರಮಿಸುತ್ತೇನೆ... ಅತ್ಯಂತ ಬಡವರು ಸಹ ಇದು ತಮ್ಮ ದೇಶ ಎಂದು ಭಾವಿಸುವ, ಇಂತಹ ರಾಷ್ಟ್ರದ ನಿರ್ಮಾಣದಲ್ಲಿ ಅವರ ಧ್ವನಿಯನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳಿಸಬಲ್ಲ, ಯಾವುದೇ ಉನ್ನತ ಮತ್ತು ಕೆಳವರ್ಗಗಳಿಲ್ಲದ, ಎಲ್ಲ ಸಮುದಾಯಗಳು ಪರಿಪೂರ್ಣ ಸಾಮರಸ್ಯದೊಂದಿಗೆ ಬದುಕುವ ಭಾರತಕ್ಕಾಗಿ ನಾನು ಕೆಲಸ ಮಾಡುತ್ತೇನೆ. ಇಂತಹ ಭಾರತದಲ್ಲಿ ಅಸ್ಪೃಶ್ಯತೆ ಅಥವಾ ಅಮಲೇರಿಸುವ ಪಾನೀಯಗಳು ಮತ್ತು ಮಾದಕದ್ರವ್ಯದ ಆಪತ್ತುಗಳಿಗೆ ಯಾವುದೇ ಅವಕಾಶವಿರಬಾರದು. ಮಹಿಳೆಯರಿಗೂ ಪುರುಷರಿಗೆ ಇರುವ ಹಕ್ಕುಗಳು ಇರಬೇಕು. ಬೇರೆ ಯಾವುದರಿಂದಲೂ ನಾನು ಸಂತೃಪ್ತನಾಗುವುದಿಲ್ಲ.*



ಸಂವಿಧಾನ ರಚನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಡಾ. ಅಂಬೇಡ್ಕರ್ ಸಹ ಅಸಮಾನತೆಯನ್ನು ವರ್ಜಿಸಿದ ಭಾರತದ ಕನಸನ್ನು ಕಂಡಿದ್ದರು. ಆದರೆ, ಅಸಮಾನತೆಯನ್ನು ಹೇಗೆ ಹೋಗಲಾಡಿಸಬಹುದು ಎನ್ನುವ ಕುರಿತು ಅವರಿಗೆ ವಿಭಿನ್ನ ಗ್ರಹಿಕೆಯಿತ್ತು. ಮಹಾತ್ಮ ಗಾಂಧಿ ಮತ್ತು ಅವರ ಕಾಣ್ಕೆಯನ್ನು ಅಂಬೇಡ್ಕರ್ ಆಗಾಗ್ಗೆ ಕಟುವಾಗಿ ಟೀಕಿಸಿದ್ದರು.

ಸಾಂವಿಧಾನಿಕ ಸಭೆಯ ಸಮಾರೋಪ ಭಾಷಣದಲ್ಲಿ ಅವರು ತಮ್ಮ ಆತಂಕವನ್ನು ಸ್ಪಷ್ಟವಾಗಿ ತಿಳಿಸಿದ್ದರು:



**ಕನ್ಹಯ್ಯಲಾಲ್ ಮಾಣಿಕ್ ಲಾಲ್ ಮುನ್ಶಿ** (1887–1971) ಜನ್ಮಸ್ಥಳ: ಗುಜರಾತ್. ವಕೀಲರು, ಇತಿಹಾಸಜ್ಞರು ಮತ್ತು ಭಾಷಾ ತಜ್ಞರು. ಕಾಂಗ್ರೆಸ್ ನಾಯಕರು ಮತ್ತು ಗಾಂಧಿವಾದಿ. ನಂತರ: ಕೇಂದ್ರ ಸಂಪುಟದಲ್ಲಿ ಸಚಿವರು. ಸ್ವತಂತ್ರ ಪಕ್ಷದ ಸಂಸ್ಥಾಪಕರು



**ಭೀಮ್‌ರಾವ್ ರಾಮ್‌ಜೀ ಅಂಬೇಡ್ಕರ್** (1891–1956) ಜನ್ಮಸ್ಥಳ: ಮಧ್ಯಪ್ರದೇಶ. ಕರಡು ಸಮಿತಿಯ ಅಧ್ಯಕ್ಷರು. ಸಾಮಾಜಿಕ ಕ್ರಾಂತಿಯ ಚಿಂತಕರು; ಜಾತಿ ವಿಭಜನೆಗಳು ಮತ್ತು ಜಾತಿ ಆಧಾರಿತ ಅಸಮಾನತೆಯ ವಿರೋಧಿಗಳು. ನಂತರ: ಸ್ವಾತಂತ್ರ್ಯೋತ್ತರ ಭಾರತದ ಮೊದಲ ಸಂಪುಟದ ಕಾನೂನು ಸಚಿವರು. ರಿಪಬ್ಲಿಕ್ ಪಾರ್ಟಿ ಆಫ್ ಇಂಡಿಯಾದ ಸ್ಥಾಪಕರು.



**ಶ್ಯಾಮ ಪ್ರಸಾದ್ ಮುಖರ್ಜಿ** (1901–1953) **ಜನ್ಮಸ್ಥಳ:** ಪಶ್ಚಿಮ ಬಂಗಾಳ. ಹಂಗಾಮಿ ಸರ್ಕಾರದಲ್ಲಿ ಕೈಗಾರಿಕೆ ಮತ್ತು ಸರಬರಾಜು ಸಚಿವರು. ಶಿಕ್ಷಣ ತಜ್ಞರು ಮತ್ತು ವಕೀಲರು. ಹಿಂದೂ ಮಹಾಸಭಾದಲ್ಲಿ ಸಕ್ರಿಯ. ನಂತರ: ಭಾರತೀಯ ಜನಸಂಘದ ಸ್ಥಾಪಕ ಅಧ್ಯಕ್ಷರು



**ಜವಹರ ಲಾಲ್ ನೆಹರು**
(1889–1964)
ಜನ್ಮಸ್ಥಳ: ಉತ್ತರ ಪ್ರದೇಶ.
ಹಂಗಾಮಿ ಸರ್ಕಾರದಲ್ಲಿ ಪ್ರಧಾನ ಮಂತ್ರಿ. ವಕೀಲರು ಮತ್ತು ಕಾಂಗ್ರೆಸ್ ನಾಯಕರು. ಸಮಾಜವಾದ, ಪ್ರಜಾಪ್ರಭುತ್ವದ ಪ್ರತಿಪಾದಕರು ಮತ್ತು ಸಾಮ್ರಾಜ್ಯಶಾಹಿಯ ವಿರೋಧಿ.
ನಂತರ: ಭಾರತದ ಮೊದಲ ಪ್ರಧಾನ ಮಂತ್ರಿ.



**ಸರೋಜಿನಿ ನಾಯ್ಡು** (1879–1949)
ಜನ್ಮಸ್ಥಳ: ಆಂಧ್ರ ಪ್ರದೇಶ.
ಕವಯಿತ್ರಿ, ಬರಹಗಾರರು ಮತ್ತು ರಾಜಕೀಯ ಕಾರ್ಯಕರ್ತರು. ಕಾಂಗ್ರೆಸ್ನ ಅತ್ಯುನ್ನತ ನಾಯಕರಲ್ಲಿ ಒಬ್ಬರು.
ನಂತರ: ಉತ್ತರ ಪ್ರದೇಶದ ರಾಜ್ಯಪಾಲರು.



**ಸೋಮನಾಥ್ ಲಹಿರಿ** (1901–1984)
ಜನ್ಮಸ್ಥಳ: ಪಶ್ಚಿಮ ಬಂಗಾಳ.
ಲೇಖಕರು ಮತ್ತು ಸಂಪಾದಕರು. ಭಾರತೀಯ ಕಮ್ಯೂನಿಸ್ಟ್ ಪಕ್ಷದ ನಾಯಕರು.
ನಂತರ: ಪಶ್ಚಿಮ ಬಂಗಾಳ ವಿಧಾನಸಭೆಯ ಸದಸ್ಯರು.

*"1950ರ ಜನವರಿ 26ರಂದು ನಾವು ವಿರೋಧಾಭಾಸದ ಬದುಕಿನತ್ತ ಕಾಲಿಡುತ್ತಿದ್ದೇವೆ. ರಾಜಕೀಯದಲ್ಲಿ ನಾವು ಸಮಾನತೆ ಹೊಂದಲಿದ್ದೇವೆ ಹಾಗೂ ಸಾಮಾಜಿಕ ಮತ್ತು ಆರ್ಥಿಕ ಬದುಕಿನಲ್ಲಿ ಅಸಮಾನತೆಯನ್ನು ಅನುಭವಿಸಲಿದ್ದೇವೆ. ರಾಜಕೀಯದಲ್ಲಿ 'ನಾವು ಒಬ್ಬ ವ್ಯಕ್ತಿ ಒಂದು ಮತ' ಮತ್ತು 'ಒಂದು ಮತ ಒಂದು ಮೌಲ್ಯ' ಎಂಬ ತತ್ತ್ವವನ್ನು ಅಂಗೀಕರಿಸಲಿದ್ದೇವೆ. ನಮ್ಮ ಸಾಮಾಜಿಕ ಮತ್ತು ಆರ್ಥಿಕ ಬದುಕಿನಲ್ಲಿ, ನಮ್ಮ ಸಾಮಾಜಿಕ ಮತ್ತು ಆರ್ಥಿಕ ಸಂರಚನೆಯ ಕಾರಣದಿಂದಾಗಿ; ಒಬ್ಬ ವ್ಯಕ್ತಿ ಒಂದು ಮೌಲ್ಯ ಎಂಬ ತತ್ತ್ವವನ್ನು ನಿರಾಕರಿಸುವುದನ್ನು ಮುಂದುವರಿಸಲಿದ್ದೇವೆ. ಎಷ್ಟು ಕಾಲದವರೆಗೂ ಈ ವಿರೋಧಾಭಾಸದ ಬದುಕನ್ನು ನಾವು ಮುಂದುವರಿಸಬಹುದು? ನಮ್ಮ ಸಾಮಾಜಿಕ ಮತ್ತು ಆರ್ಥಿಕ ಬದುಕಿನಲ್ಲಿ ಅದೆಷ್ಟು ಕಾಲ ನಾವು ಸಮಾನತೆಯನ್ನು ನಿರಾಕರಿಸಬಹುದು? ದೀರ್ಘಕಾಲದವರೆಗೂ ನಾವು ಇದನ್ನು ನಿರಾಕರಿಸುವುದನ್ನು ಮುಂದುವರಿಸಿದಲ್ಲಿ; ನಮ್ಮ ರಾಜಕೀಯ ಪ್ರಜಾತಾಂತ್ರಿಕತೆಯನ್ನು ಗಂಡಾಂತರಕ್ಕೆ ಒಡ್ಡಿದಂತಾಗುತ್ತದೆ."*

ಅಂತಿಮವಾಗಿ 1947ರ ಆಗಸ್ಟ್ ಮಧ್ಯರಾತ್ರಿ ಸಾಂವಿಧಾನಿಕ ಸಭೆಯನ್ನು ಉದ್ದೇಶಿಸಿ ಜವಹರ ಲಾಲ್ ನೆಹರು ಮಾಡಿದ ಪ್ರಸಿದ್ಧ ಭಾಷಣದತ್ತ ಗಮನಹರಿಸೋಣ:

*"ಅನೇಕ ವರ್ಷಗಳ ಹಿಂದೆ ನಾವು ವಿಧಿಯೊಂದಿಗೆ ಸಮಾಗಮಗೊಂಡಿದ್ದೆವು. ನಮ್ಮ ಒತ್ತೆಯನ್ನು (pledge) ಸಮಗ್ರವಾಗಿ ಅಥವಾ ಸಂಪೂರ್ಣವಾಗಿಯಷ್ಟೇ ಅಲ್ಲದೆ, ಸಾಕಷ್ಟು ಗಮನಾರ್ಹವಾಗಿ ವಿಮೋಚನೆಗೊಳಿಸುವ ಸಮಯವೀಗ ಒದಗಿದೆ. ಈ ನಡುರಾತ್ರಿಯ ಘಳಿಗೆಯಲ್ಲಿ ಇಡೀ ವಿಶ್ವವು ನಿದ್ರಿಸುತ್ತಿರುವಾಗ, ಭಾರತವು ಬದುಕು ಮತ್ತು ಸ್ವಾತಂತ್ರ್ಯದತ್ತ ಸಚೇತನಗೊಳ್ಳುತ್ತಿದೆ. ಹಳೆಯದನ್ನು ತೊರೆದು, ಹೊಸತನಕ್ಕೆ ಕಾಲಿಡುವ, ಯುಗವೊಂದು ಸಮಾಪ್ತಿಗೊಳ್ಳುವ ಮತ್ತು ದೀರ್ಘಕಾಲದಿಂದಲೂ ಶೋಷಿಸಲ್ಪಟ್ಟ ನಾಡಿನ ಆತ್ಮವು ಧ್ವನಿಯನ್ನು ಪಡೆಯುವ ಈ ಗಳಿಗೆಯು ಇತಿಹಾಸದಲ್ಲಿ ಅಪರೂಪ. ಈ ಮಹತ್ತ್ವಪೂರ್ಣ ಸಮಯದಲ್ಲಿ ಭಾರತದ ಮತ್ತು ಭಾರತಾಂಬೆಯ ಪ್ರಜೆಗಳ ಸೇವೆಗಾಗಿ ಮತ್ತು ಮಾನವೀಯತೆಯೆಂಬ ಅದಕ್ಕಿಂತಲೂ ಬೃಹತ್ತಾದ ಉದ್ದೇಶಕ್ಕಾಗಿ ನಮ್ಮನ್ನು ಮುಡಿಪಾಗಿಡುವುದಾಗಿ ಮಾಡುವ ಪ್ರತಿಜ್ಞೆಯು ಸಮರ್ಪಕವೆನಿಸುತ್ತದೆ.*

*ಸ್ವಾತಂತ್ರ್ಯ ಮತ್ತು ಅಧಿಕಾರಗಳು ಜವಾಬ್ದಾರಿಯನ್ನು ನೀಡುತ್ತವೆ. ಭಾರತದ ಸ್ವತಂತ್ರ ಜನರನ್ನು ಪ್ರತಿನಿಧಿಸುವ ಸ್ವಾಯತ್ತ ಸಂಸ್ಥೆಯಾದ ಈ ಸಭೆಯು ಸದರಿ ಜವಾಬ್ದಾರಿಯನ್ನು ಹೊಂದಿದೆ. ಸ್ವಾತಂತ್ರ್ಯದ ಜನನಕ್ಕೆ ಮೊದಲು ನಾವು ಎಲ್ಲ ರೀತಿಯ ಪ್ರಯಾಸದ ಪ್ರಯತ್ನಗಳ ನೋವುಗಳನ್ನು ಅನುಭವಿಸಿದ್ದೇವೆ ಮತ್ತು ಈ ನೋವಿನ ನೆನಪಿನಿಂದಾಗಿ ನಮ್ಮ ಹೃದಯಗಳು ಭಾರವಾಗಿವೆ. ಇದರಲ್ಲಿನ ಕೆಲವು ನೋವುಗಳು ಈಗಲೂ ಮುಂದುವರಿಯುತ್ತಿವೆ. ಆದಾಗ್ಯೂ, ಹಳೆಯದು ಮುಗಿದುಹೋಗಿದೆ ಮತ್ತು ಭವಿಷ್ಯವು ನಮ್ಮನ್ನು ಕೈಬೀಸಿ ಕರೆಯುತ್ತಿದೆ.*

*ಭವಿಷ್ಯವು ಸುಲಭದಾಯಕವಾಗಿಲ್ಲ ಅಥವಾ ಆರಾಮದಾಯಕವಾಗಿಲ್ಲ, ಆದರೆ ನಿರಂತರ ಪ್ರಯತ್ನದ ಅಗತ್ಯವಿದೆ. ಏಕೆಂದರೆ- ನಾವು ಮಾಡಿರುವ ಮತ್ತು ಇಂದು ನಾವು ಮಾಡುವ ಪ್ರತಿಜ್ಞೆಯನ್ನು ಪೂರ್ಣಗೊಳಿಸಬೇಕಿದೆ. ಭಾರತಕ್ಕೆ ಸೇವೆ ನೀಡುವುದು ಎಂದರೆ ಬಳಲುತ್ತಿರುವ ಲಕ್ಷಾಂತರ ಮಂದಿಗೆ ಸೇವೆ ನೀಡುವುದು. ಅಂದರೆ, ಬಡತನ ಮತ್ತು ಅಜ್ಞಾನ ಹಾಗೂ ರೋಗಗಳು ಮತ್ತು ಅವಕಾಶಗಳ ಅಸಮಾನತೆಯನ್ನು ಕೊನೆಗಾಣಿಸುವುದು. ಪ್ರತಿಯೊಂದು ಕಣ್ಣಿನ ಪ್ರತಿಯೊಂದು ಅಶ್ರುವನ್ನು ಒರೆಸುವುದು, ನಮ್ಮ ತಲೆಮಾರಿನ ಮಹಾನ್ ವ್ಯಕ್ತಿಯ ಮಹತ್ವಾಕಾಂಕ್ಷೆಯಾಗಿದೆ. ಅದು ನಮ್ಮನ್ನು ಮೀರಿದ ವಿಷಯವಾಗಿರಬಹುದು, ಆದರೆ ಕಣ್ಣೀರು ಮತ್ತು ಬಳಲಿಕೆ ಇರುವ ತನಕ ನಮ್ಮ ಕೆಲಸ ಮುಗಿಯುವುದಿಲ್ಲ."*

**ನಿಮ್ಮ ಪ್ರಗತಿಯನ್ನು ಪರಿಶೀಲಿಸಿ**

**1947ರ ಆಗಸ್ಟ್‌ರ ಮಧ್ಯರಾತ್ರಿ ಸಾಂವಿಧಾನಿಕ ಸಭೆಯನ್ನು ಉದ್ದೇಶಿಸಿ ಜವಹರ ಲಾಲ್ ನೆಹರು ಮಾಡಿದ ಭಾಷಣದಲ್ಲಿನ ಮೂರು ಉದ್ಧರಣಗಳನ್ನು ಎಚ್ಚರಿಕೆಯಿಂದ ಓದಿ.**

- ಈ ಮೂರರಲ್ಲೂ ಸಾಮಾನ್ಯವಾಗಿರುವ ಒಂದು ಚಿಂತನೆಯನ್ನು ಗುರುತಿಸಬಲ್ಲಿರಾ?
- ಈ ಸಾಮಾನ್ಯ ಚಿಂತನೆಯನ್ನು ಅಭಿವ್ಯಕ್ತಿಗೊಳಿಸುವ ಅವರ ರೀತಿಯಲ್ಲಿ ಇರುವ ವ್ಯತ್ಯಾಸಗಳೇನು?

## ಸಂವಿಧಾನದ ತತ್ತ್ವ

ಸ್ವಾತಂತ್ರ್ಯ ಸಂಗ್ರಾಮಕ್ಕೆ ಪ್ರೇರಣೆಯಾದ ಮತ್ತು ಅದನ್ನು ನಿರ್ದೇಶಿಸಿದ ಹಾಗೂ ಪ್ರತಿಯಾಗಿ ಅದರಿಂದ ಪೋಷಿಸಲ್ಪಟ್ಟ ಮೌಲ್ಯಗಳು ಭಾರತದ ಪ್ರಜಾತಾಂತ್ರಿಕತೆಯ ತಳಹದಿಯಾದವು. ಈ ಮೌಲ್ಯಗಳನ್ನು ಭಾರತದ ಸಂವಿಧಾನದ ಪೀಠಿಕೆಯಲ್ಲಿ ಅಡಕಗೊಳಿಸಲಾಗಿದೆ. ಅವು ಭಾರತ ಸಂವಿಧಾನದ ಎಲ್ಲ ಅನುಚ್ಛೇದಗಳನ್ನು ನಿರ್ದೇಶಿಸುತ್ತವೆ. ಸಂವಿಧಾನವು ತನ್ನ ಮೂಲಭೂತ ಮೌಲ್ಯಗಳನ್ನು ಕುರಿತ ಕಿರಿದಾದ ಹೇಳಿಕೆಯೊಂದಿಗೆ ಪ್ರಾರಂಭಗೊಳ್ಳುತ್ತದೆ. ಇದನ್ನು ಸಂವಿಧಾನದ ಪೀಠಿಕೆ ಎಂದು ಕರೆಯಲಾಗಿದೆ. ಅಮೆರಿಕದ ಮಾದರಿಯಿಂದ ಪ್ರೇರಣೆಗೊಂಡು, ಸಮಕಾಲೀನ ಪ್ರಪಂಚದ ಹೆಚ್ಚಿನ ದೇಶಗಳು ತಮ್ಮ ಸಂವಿಧಾನವನ್ನು ಪೀಠಿಕೆಯಿಂದ ಪ್ರಾರಂಭಿಸುವ ಪರಿಪಾಠವನ್ನು ಆಯ್ದುಕೊಂಡಿವೆ.

We the People
of the United States

*ಅಮೆರಿಕ ಸಂಯುಕ್ತ ಸಂಸ್ಥಾನದ ಪ್ರಜೆಗಳಾದ ನಾವು*

*ಹೆಚ್ಚು ಪರಿಪೂರ್ಣವಾದ ಒಕ್ಕೂಟವನ್ನು ರೂಪಿಸುವುದಕ್ಕಾಗಿ, ನ್ಯಾಯವನ್ನು ಸ್ಥಾಪಿಸುವುದಕ್ಕಾಗಿ,*
*ಆಂತರಿಕ ಶಾಂತಿಯನ್ನು ಖಚಿತಪಡಿಸುವುದಕ್ಕಾಗಿ, ಸರ್ವಸಮಾನ ರಕ್ಷಣೆ ಒದಗಿಸುವುದಕ್ಕಾಗಿ,*
*ಸಾರ್ವತ್ರಿಕ ಕಲ್ಯಾಣವನ್ನು ಉತ್ತೇಜಿಸುವುದಕ್ಕಾಗಿ ಹಾಗೂ ನಮಗೆ ಮತ್ತು*
*ನಮ್ಮ ಭವಿಷ್ಯದ ಪೀಳಿಗೆಗೆ ಸ್ವಾತಂತ್ರ್ಯದ ಆಶೀರ್ವಾದವನ್ನು ಖಚಿತಪಡಿಸುವುದಕ್ಕಾಗಿ*
*ಅಮೆರಿಕ ಸಂಯುಕ್ತ ಸಂಸ್ಥಾನದ ಸಂವಿಧಾನವನ್ನು ಸಂಕಲ್ಪಿಸುತ್ತೇವೆ ಮತ್ತು ಸ್ಥಾಪಿಸುತ್ತೇವೆ.*

*ದಕ್ಷಿಣ ಆಫ್ರಿಕಾದ ಪ್ರಜೆಗಳಾದ ನಾವು,*
*ನಮ್ಮ ಹಿಂದಿನ ಅನ್ಯಾಯವನ್ನು ಗುರುತಿಸುತ್ತೇವೆ;*
*ನಮ್ಮ ನೆಲದಲ್ಲಿ ನ್ಯಾಯ ಮತ್ತು ಸ್ವಾತಂತ್ರ್ಯಕ್ಕಾಗಿ ನೋವು ಅನುಭವಿಸಿದವರನ್ನು ಗೌರವಿಸುತ್ತೇವೆ;*
*ನಮ್ಮ ದೇಶದ ನಿರ್ಮಾಣ ಮತ್ತು ಅಭಿವೃದ್ಧಿಗಾಗಿ ದುಡಿದವರನ್ನು ಗೌರವಿಸುತ್ತೇವೆ; ಮತ್ತು ದಕ್ಷಿಣ ಆಫ್ರಿಕಾವು ಅದರ ಎಲ್ಲ ನಿವಾಸಿಗಳಿಗೂ ಸೇರಿದ್ದು, ವೈವಿಧ್ಯತೆಯಲ್ಲಿ ಏಕತೆಯನ್ನು ಹೊಂದಿದೆ ಎಂದು ನಂಬುತ್ತೇವೆ. ನಾವು, ಈ ಕಾರಣಕ್ಕಾಗಿ, ಮುಕ್ತವಾಗಿ ಆಯ್ಕೆಯಾದ ನಮ್ಮ ಪ್ರತಿನಿಧಿಗಳ ಮೂಲಕ–*
*ಈ ಹಿಂದಿನ ಒಡಕುಗಳನ್ನು ಶಮನಗೊಳಿಸಲು ಮತ್ತು ಪ್ರಜಾಸತ್ತಾತ್ಮಕ ಮೌಲ್ಯಗಳು, ಸಾಮಾಜಿಕ ನ್ಯಾಯ ಮತ್ತು ಮೂಲಭೂತ ಮಾನವ ಹಕ್ಕುಗಳನ್ನು ಆಧರಿಸಿದ ಸಮಾಜವನ್ನು ನಿರ್ಮಿಸಲು;*
*ಜನರ ಇಚ್ಛೆಯನ್ನಾಧರಿಸಿದ ಸರ್ಕಾರಕ್ಕೆ ಮತ್ತು ಪ್ರತಿ ಪ್ರಜೆಯು ಕಾನೂನಿನಿಂದ ರಕ್ಷಿಸಲ್ಪಟ್ಟ ಪ್ರಜಾತಾಂತ್ರಿಕ ಮತ್ತು ಮುಕ್ತ ಸಮಾಜಕ್ಕೆ ಅಡಿಪಾಯವನ್ನು ಹಾಕಲು;*
*ಎಲ್ಲ ನಾಗರಿಕರ ಜೀವನದ ಗುಣಮಟ್ಟವನ್ನು ಸುಧಾರಿಸಲು ಹಾಗೂ ಪ್ರತಿ ವ್ಯಕ್ತಿಯ ಅಂತಸ್ಸತ್ವವನ್ನು ವಿಮುಕ್ತಿಗೊಳಿಸಲು;*
*ಮತ್ತು ರಾಷ್ಟ್ರಗಳ ಪರಿವಾರದಲ್ಲಿ ಸಾರ್ವಭೌಮ ರಾಷ್ಟ್ರವಾಗಿ ತನಗೆ ದೊರಕಬೇಕಾದ ಸ್ಥಾನವನ್ನು ಪಡೆಯಲು ಸಾಧ್ಯವಾಗುವಂತೆ ಸಂಘಟಿತ ಮತ್ತು ಪ್ರಜಾತಾಂತ್ರಿಕ ದಕ್ಷಿಣ ಆಫ್ರಿಕಾವನ್ನು ಕಟ್ಟಲು – ಸಂವಿಧಾನವನ್ನು ಗಣತಂತ್ರದ ಅತ್ಯುಚ್ಚ ಕಾನೂನಾಗಿ ಅಳವಡಿಸುತ್ತೇವೆ.*
*ನಮ್ಮ ಜನರನ್ನು ದೇವರು ರಕ್ಷಿಸಲಿ.*

*Nkosi Sikelel' iAfrika. Morena boloka setjhaba sa heso.*
*God seën Suid-Afrika. God bless South Africa.*
*Mudzimu fhatutshedza Afurika. Hosi katekisa Afrika.*

ನಮ್ಮ ಸಂವಿಧಾನದ ಪೀಠಿಕೆಯನ್ನು ನಾವು ಎಚ್ಚರಿಕೆಯಿಂದ ಓದಿ ಇದರ ಪ್ರತಿಯೊಂದು ಪ್ರಮುಖ ಶಬ್ದದ ಅರ್ಥವನ್ನು ಅರ್ಥೈಸೋಣ.

ಸಂವಿಧಾನದ ಪೀಠಿಕೆಯು ಪ್ರಜಾತಾಂತ್ರಿಕತೆಯನ್ನು ಕುರಿತ ಕವನದಂತೆ ಓದಿಸಿಕೊಳ್ಳುತ್ತದೆ. ಇಡೀ ಸಂವಿಧಾನ ರಚನೆಗೆ ತಳಹದಿ ಎನಿಸಿರುವ ತತ್ತ್ವವನ್ನು ಇದು ಹೊಂದಿದೆ. ಯಾವುದೇ ಕಾನೂನು ಮತ್ತು ಸರ್ಕಾರದ ಯಾವುದೇ ಕ್ರಮವನ್ನು ಪರೀಕ್ಷಿಸಲು ಮತ್ತು ಮೌಲ್ಯಮಾಪನ ಮಾಡಲು, ಅದು ಸರಿಯೇ ಅಥವಾ ತಪ್ಪೇ ಎಂದು ಕಂಡುಹಿಡಿಯಲು, ಇದು ಮಾನದಂಡವನ್ನು ಒದಗಿಸುತ್ತದೆ. ಇದು ಭಾರತದ ಸಂವಿಧಾನದ ಆತ್ಮವಾಗಿದೆ.

**ಭಾರತವಾಸಿಗಳಾದ ನಾವು,**
ಭಾರತವನ್ನು **ಸಾರ್ವಭೌಮ,**
**ಸಮಾಜವಾದಿ, ಜಾತ್ಯತೀತ,**
**ಲೋಕತಾಂತ್ರಿಕ**
**ಗಣತಂತ್ರ**ವನ್ನಾಗಿ ವಿಧಿಯುಕ್ತವಾಗಿ
ಸ್ಥಾಪಿಸಿ, ಅದರ ಎಲ್ಲಾ ಪ್ರಜೆಗಳಿಗೆ:
ಸಾಮಾಜಿಕ, ಆರ್ಥಿಕ ಮತ್ತು
ರಾಜಕೀಯ **ನ್ಯಾಯ;**
ವಿಚಾರ, ಅಭಿವ್ಯಕ್ತಿ, ನಂಬಿಕೆ, ಧರ್ಮಶ್ರದ್ಧೆ
ಮತ್ತು ಆರಾಧನೆಗಳಲ್ಲಿ **ಸ್ವಾತಂತ್ರ್ಯ;**
ಸ್ಥಾನಮಾನ ಮತ್ತು
ಅವಕಾಶಗಳ **ಸಮಾನತೆ**ಗಳನ್ನು
ದೊರಕಿಸಿ;
ವೈಯುಕ್ತಿಕ ಘನತೆ ಮತ್ತು ದೇಶದ ಒಗ್ಗಟ್ಟು
ಮತ್ತು ಐಕ್ಯತೆಯನ್ನು ಖಾತರಿಪಡಿಸುವ
**ಭ್ರಾತೃತ್ವತೆ**ಯನ್ನು ಎಲ್ಲರಲ್ಲೂ
ಪ್ರೋತ್ಸಾಹಿಸಲು ನಿರ್ಧರಿಸಿ;
ನಮ್ಮ ಸಂವಿಧಾನ ರಚನಾ
ಸಭೆಯಲ್ಲಿ *ಈ 1949ರ ನವೆಂಬರ್*
*ತಿಂಗಳ 26ನೇ ದಿನದಂದು,* ಸ್ವತಃ
ಈ ಸಂವಿಧಾನವನ್ನು ಸ್ವೀಕರಿಸಿ,
ಶಾಸನವನ್ನಾಗಿ ವಿಧಿಸಿಕೊಳ್ಳುತ್ತೇವೆ.

### ಭಾರತವಾಸಿಗಳಾದ ನಾವು

ಸಂವಿಧಾನವನ್ನು ಪ್ರಜೆಗಳು ತಮ್ಮ ಪ್ರತಿನಿಧಿಗಳ ಮೂಲಕ ರಚಿಸಿ ಜಾರಿಗೊಳಿಸಿದ್ದಾರೆ. ಇದು ಅವರಿಗೆ ಯಾವುದೇ ರಾಜನಿಂದಾಗಲಿ ಅಥವಾ ಬಾಹ್ಯಶಕ್ತಿಗಳಿಂದಾಗಲಿ ನೀಡಲ್ಪಟ್ಟಿಲ್ಲ.

### ಸಾರ್ವಭೌಮ

ಆಂತರಿಕ ಮತ್ತು ಬಾಹ್ಯ ವಿಚಾರಗಳ ಕುರಿತು ನಿರ್ಧಾರವನ್ನು ತೆಗೆದುಕೊಳ್ಳಲು ಜನರು ಸರ್ವೋಚ್ಚ ಅಧಿಕಾರ ಹೊಂದಿದ್ದಾರೆ. ಯಾವುದೇ ಬಾಹ್ಯಶಕ್ತಿಯು ಭಾರತ ಸರ್ಕಾರಕ್ಕೆ ಆಜ್ಞಾಪಿಸುವಂತಿಲ್ಲ.

### ಸಮಾಜವಾದಿ

ಸಂಪತ್ತನ್ನು ಸಾಮಾಜಿಕವಾಗಿ ಸೃಷ್ಟಿಸಲಾಗುತ್ತದೆ. ಸಮಾಜವು ಇದನ್ನು ಸಮಾನವಾಗಿ ಹಂಚಿಕೊಳ್ಳಬೇಕು. ಸಮಾಜೋ-ಆರ್ಥಿಕ ಅಸಮಾನತೆಗಳನ್ನು ಕಡಿಮೆ ಮಾಡಲು ಸರ್ಕಾರವು ಭೂಮಿಯ ಒಡೆತನ ಮತ್ತು ಕೈಗಾರಿಕೆಯನ್ನು ನಿಯಂತ್ರಿಸಬೇಕು.

### ಜಾತ್ಯತೀತ

ನಾಗರಿಕರಿಗೆ ಯಾವುದೇ ಧರ್ಮವನ್ನು ಪಾಲಿಸುವ ಸಂಪೂರ್ಣ ಸ್ವಾತಂತ್ರ್ಯವಿದೆ. ಆದರೆ ಯಾವುದೇ ಅಧಿಕೃತ ಧರ್ಮವೆಂಬುದು ಇಲ್ಲ. ಎಲ್ಲಾ ಧಾರ್ಮಿಕ ನಂಬಿಕೆಗಳು ಮತ್ತು ಪದ್ಧತಿಗಳನ್ನು ಸರ್ಕಾರವು ಸಮಾನ ಗೌರವದೊಂದಿಗೆ ನೋಡುತ್ತದೆ.

### ಪ್ರಜಾತಾಂತ್ರಿಕ

ಜನರು ಸಮಾನ ರಾಜಕೀಯ ಹಕ್ಕುಗಳನ್ನು ಅನುಭವಿಸುವ, ತಮ್ಮ ಆಡಳಿತಗಾರರನ್ನು ಚುನಾಯಿಸುವ ಮತ್ತು ಅವರನ್ನು ಜವಾಬ್ದಾರರನ್ನಾಗಿಸುವ ಒಂದು ವಿಧದ ಸರ್ಕಾರ. ಸರ್ಕಾರವು ಕೆಲ ಮೂಲಭೂತ ನಿಯಮಗಳ ಅನುಸಾರವಾಗಿ ನಡೆಯಬೇಕು.

### ಗಣತಂತ್ರ

ರಾಜ್ಯದ ಮುಖ್ಯಸ್ಥನು ಚುನಾಯಿತ ವ್ಯಕ್ತಿಯಾಗಿರುತ್ತಾನೆ ಮತ್ತು ಈ ಸ್ಥಾನವು ಅನುವಂಶೀಯವಲ್ಲ.

### ನ್ಯಾಯ

ಜಾತಿ, ಧರ್ಮ ಮತ್ತು ಲಿಂಗದ ಆಧಾರದಲ್ಲಿ ಜನರ ತಾರತಮ್ಯ ಮಾಡುವಂತಿಲ್ಲ. ಸಾಮಾಜಿಕ ಅಸಮಾನತೆಯನ್ನು ಕಡಿಮೆ ಮಾಡಬೇಕು. ಸರ್ಕಾರವು ಎಲ್ಲರ ಕಲ್ಯಾಣಕ್ಕಾಗಿ, ಮುಖ್ಯವಾಗಿ ಪ್ರತಿಕೂಲ ಸ್ಥಿತಿಯಲ್ಲಿರುವ ವರ್ಗಗಳಿಗಾಗಿ ಕೆಲಸ ಮಾಡತಕ್ಕದ್ದು.

### ಸ್ವಾತಂತ್ರ್ಯ

ಜನರು ಏನು ಯೋಚಿಸುತ್ತಾರೋ, ಹೇಗೆ ಅವರು ತಮ್ಮ ಯೋಚನೆಗಳನ್ನು ವ್ಯಕ್ತಪಡಿಸಲು ಇಚ್ಛಿಸುತ್ತಾರೋ ಮತ್ತು ತಮ್ಮ ಚಿಂತನೆಗಳನ್ನು ಯಾವ ರೀತಿ ಕಾರ್ಯರೂಪಕ್ಕಿಳಿಸಲು ನಿರ್ಧರಿಸುತ್ತಾರೋ, ಅವನ್ನು ಕುರಿತಂತೆ, ತರ್ಕರಹಿತ ನಿರ್ಬಂಧಗಳು ಇರುವುದಿಲ್ಲ.

### ಸಮಾನತೆ

ಕಾನೂನಿನ ಎದುರು ಎಲ್ಲರೂ ಸಮಾನರು. ಸಾಂಪ್ರದಾಯಿಕ ಸಾಮಾಜಿಕ ಅಸಮಾನತೆಗಳು ಕೊನೆಗೊಳ್ಳಬೇಕು. ಎಲ್ಲರಿಗೂ ಸಮಾನ ಅವಕಾಶಗಳು ದೊರೆಯುವುದನ್ನು ಸರ್ಕಾರವು ಖಚಿತಗೊಳಿಸಬೇಕು.

### ಭ್ರಾತೃತ್ವ

ನಾವೆಲ್ಲರೂ ಒಂದೇ ಕುಟುಂಬದ ಸದಸ್ಯರಂತೆ ವರ್ತಿಸಬೇಕು. ಯಾರೂ ತನ್ನ ಜೊತೆ ಇರುವ ಇತರ ನಾಗರಿಕನನ್ನು ಕೀಳಾಗಿ ಕಾಣಬಾರದು.

**ನಿಮ್ಮ ಪ್ರಗತಿಯನ್ನು ಪರಿಶೀಲಿಸಿ**

**ಅಮೆರಿಕ ಸಂಯುಕ್ತ ಸಂಸ್ಥಾನ, ಭಾರತ ಮತ್ತು ದಕ್ಷಿಣ ಆಫ್ರಿಕಾದ ಸಂವಿಧಾನಗಳ ಪೀಠಿಕೆಗಳನ್ನು ಹೋಲಿಸಿ.**

- ಈ ಮೂರು ಪೀಠಿಕೆಗಳಲ್ಲಿ ಇರುವ ಸಮಾನ ಚಿಂತನೆಗಳನ್ನು ಪಟ್ಟಿ ಮಾಡಿ.
- ಇವುಗಳಲ್ಲಿ ಇರುವ ಪ್ರಮುಖ ವ್ಯತ್ಯಾಸಗಳಲ್ಲಿ ಕನಿಷ್ಠ ಒಂದನ್ನು ಗುರುತು ಹಾಕಿ.
- ಇವುಗಳಲ್ಲಿ ಯಾವುದು ತನ್ನ ಗತಕಾಲವನ್ನು ಪ್ರತಿನಿಧಿಸುತ್ತದೆ?
- ಇವುಗಳಲ್ಲಿ ಯಾವುದು ದೇವರನ್ನು ಪ್ರಾರ್ಥಿಸುವುದಿಲ್ಲ?

## ಸಾಂಸ್ಥಿಕ ವಿನ್ಯಾಸ

ಸಂವಿಧಾನವು ಕೇವಲ ಮೌಲ್ಯಗಳು ಮತ್ತು ತತ್ತ್ವಗಳ ಹೇಳಿಕೆಯಲ್ಲ. ನಾವು ಈ ಮೇಲೆ ಗಮನಿಸಿದಂತೆ, ಪ್ರಮುಖವಾಗಿ ಈ ಮೌಲ್ಯಗಳನ್ನು ಸಾಂಸ್ಥಿಕ ವ್ಯವಸ್ಥೆಗಳಿಗೆ ಅಡಕಗೊಳಿಸುವುದೇ ಸಂವಿಧಾನವಾಗಿದೆ. ಭಾರತದ ಸಂವಿಧಾನ ಎಂದು ಕರೆಯಲಾಗುವ ದಾಖಲೆಯ ಹೆಚ್ಚಿನ ಭಾಗವು ಈ ವ್ಯವಸ್ಥೆಗಳನ್ನು ಸಾಕಾರಗೊಳಿಸುವುದರ ಕುರಿತಾಗಿದೆ. ಇದು ದೀರ್ಘ ಮತ್ತು ವಿವರವಾದ ದಾಖಲೆಯಾಗಿದೆ. ಹೀಗಾಗಿ ಇದನ್ನು ಪರಿಷ್ಕೃತವಾಗಿರಿಸಲು ನಿಯತವಾಗಿ ತಿದ್ದುಪಡಿಗೊಳಿಸುವ ಅಗತ್ಯವಿದೆ. ಸಂವಿಧಾನವು ಜನರ ಆಕಾಂಕ್ಷೆಗಳು ಮತ್ತು ಸಮಾಜದಲ್ಲಿ ಉಂಟಾಗುವ ಬದಲಾವಣೆಗಳಿಗೆ ಅನುಗುಣವಾಗಿರಬೇಕು ಎಂದು ಭಾರತ ಸಂವಿಧಾನದ ನಿರ್ಮಾತೃಗಳು ಅಭಿಪ್ರಾಯಪಟ್ಟಿದ್ದರು. ಅದನ್ನು ಇವರು ಪವಿತ್ರ, ಸ್ಥಾಯಿ ಮತ್ತು ಮಾರ್ಪಾಡು ಮಾಡಲಾಗದ ಕಾನೂನಾಗಿ ಪರಿಗಣಿಸಲಿಲ್ಲ. ಹೀಗಾಗಿ, ಕಾಲ ಕಾಲಕ್ಕೆ ಇದರಲ್ಲಿ ಬದಲಾವಣೆ ಮಾಡುವುದಕ್ಕಾಗಿ ಅವರು ವ್ಯವಸ್ಥೆಗಳನ್ನು ಮಾಡಿದರು. ಈ ಬದಲಾವಣೆಗಳನ್ನು ಸಂವಿಧಾನದ ತಿದ್ದುಪಡಿಗಳು ಎಂದು ಕರೆಯಲಾಗಿದೆ.

ಸಂವಿಧಾನವು ಸಾಂಸ್ಥಿಕ ವ್ಯವಸ್ಥೆಗಳನ್ನು ಬಹಳ ಕಾನೂನುಬದ್ಧ ಭಾಷೆಯಲ್ಲಿ ವಿವರಿಸುತ್ತದೆ. ನೀವು ಸಂವಿಧಾನವನ್ನು ಮೊದಲ ಬಾರಿಗೆ ಓದಿದರೆ ಅದನ್ನು ಅರ್ಥೈಸುವುದು ಸ್ವಲ್ಪ ಕಷ್ಟವಾದೀತು. ಆದರೆ ಮೂಲ ಸಾಂಸ್ಥಿಕ ವಿನ್ಯಾಸವನ್ನು ಅರ್ಥೈಸಿಕೊಳ್ಳುವುದು ಕಷ್ಟಕರವಲ್ಲ. ಯಾವುದೇ ಇತರ ಸಂವಿಧಾನದಂತೆಯೇ, ಭಾರತೀಯ ಸಂವಿಧಾನವು ದೇಶವನ್ನು ಆಳಲು ಜನರನ್ನು ಆರಿಸುವ ಕಾರ್ಯವಿಧಾನವನ್ನು ರೂಪಿಸುತ್ತದೆ. ಒಂದು ನಿರ್ಧಾರವನ್ನು ತೆಗೆದುಕೊಳ್ಳಲು ಯಾರು ಎಷ್ಟು ಅಧಿಕಾರವನ್ನು ಹೊಂದಿದ್ದಾರೆ ಎಂಬುದನ್ನು ಇದು ವ್ಯಾಖ್ಯಾನಿಸುತ್ತದೆ. ಉಲ್ಲಂಘಿಸಲಾದ ಕೆಲ ಹಕ್ಕುಗಳನ್ನು ನಾಗರಿಕರಿಗೆ ನೀಡುವ ಮೂಲಕ ಇದು ಸರ್ಕಾರದ ಕೆಲಸಗಳಿಗೆ ಮಿತಿಯನ್ನು ನಿಗದಿಪಡಿಸುತ್ತದೆ. ಈ ಅಧ್ಯಾಯದ ಉಳಿದ ಮೂರು ಭಾಗಗಳು ಭಾರತ ಸಂವಿಧಾನದ ಕಾರ್ಯ ನಿರ್ವಹಣೆಯ ಮೂರು ಅಂಶಗಳಿಗೆ ಸಂಬಂಧಿಸಿವೆ. ಪ್ರತಿ ಅಧ್ಯಾಯದಲ್ಲಿ ನಾವು ಕೆಲ ಪ್ರಮುಖ ಸಾಂವಿಧಾನಿಕ ನಿಬಂಧನೆಗಳ ಮೇಲೆ ಬೆಳಕು ಹರಿಸಲಿದ್ದೇವೆ ಮತ್ತು ಅವು ಪ್ರಜಾಸತ್ತಾತ್ಮಕ ರಾಜಕೀಯದಲ್ಲಿ ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ಅರ್ಥೈಸುವ ಪ್ರಯತ್ನ ಮಾಡಲಿದ್ದೇವೆ. ಆದರೆ ಈ ಪಠ್ಯಪುಸ್ತಕವು ಭಾರತ ಸಂವಿಧಾನದ ಸಾಂವಿಧಾನಿಕ ವಿನ್ಯಾಸದ ಎಲ್ಲಾ ಮುಖ್ಯ ಗುಣಲಕ್ಷಣಗಳನ್ನು ಒಳಗೊಂಡಿರುವುದಿಲ್ಲ. ಕೆಲವು ಇತರ ವಿಚಾರಗಳನ್ನು ನಿಮ್ಮ ಪಠ್ಯಪುಸ್ತಕದಲ್ಲಿ ಮುಂದಿನ ವರ್ಷ ಚರ್ಚಿಸಲಾಗುತ್ತದೆ.

**ಪದಕೋಶ**

**ವರ್ಣಭೇದ ನೀತಿ** : ದಕ್ಷಿಣ ಆಫ್ರಿಕಾ ಸರ್ಕಾರವು 1948ರಿಂದ 1989ರ ತನಕ ಅನುಸರಿಸಿದ ಜನಾಂಗೀಯ ಪ್ರತ್ಯೇಕೀಕರಣದ ಅಧಿಕೃತ ನೀತಿ ಮತ್ತು ಕರಿಯರ ಮೇಲೆ ನಡೆಸಿದ ದೌರ್ಜನ್ಯ.

**ಕಲಂ** : ದಾಖಲೆಯ ವಿಶಿಷ್ಟ ಭಾಗ.

**ಸಾಂವಿಧಾನಿಕ ಸಭೆ** : ದೇಶಕ್ಕೆ ಸಂವಿಧಾನವನ್ನು ಬರೆಯುವ ಜನಪ್ರತಿನಿಧಿಗಳ ಸಭೆ.

**ಸಂವಿಧಾನ** : ದೇಶವೊಂದರ ರಾಜಕೀಯ ಮತ್ತು ಸಮಾಜದ ಆಡಳಿತವನ್ನು ನಿರ್ವಹಿಸುವ ಮೂಲಭೂತ ನಿಯಮಗಳನ್ನು ಹೊಂದಿರುವ, ದೇಶದ ಅತ್ಯುಚ್ಚ ಕಾನೂನು.

**ಸಂವಿಧಾನದ ತಿದ್ದುಪಡಿ** : ದೇಶದ ಅತ್ಯುಚ್ಚ ಶಾಸಕಾಂಗ ಸಂಸ್ಥೆಯು ಸಂವಿಧಾನದಲ್ಲಿ ಮಾಡಿದ ಬದಲಾವಣೆ.

**ಕರಡು** : ಕಾನೂನುಬದ್ಧ ದಾಖಲೆಯ ಪೂರ್ವಭಾವಿ ಆವೃತ್ತಿ.

**ತತ್ತ್ವ** : ಒಬ್ಬರ ಚಿಂತನೆಗಳು ಮತ್ತು ಕಾರ್ಯಗಳಿಗೆ ಆಧಾರವೆನಿಸಿರುವ ಪರಮ ಮೂಲಭೂತ ತತ್ತ್ವಗಳು.

**ಪೀಠಿಕೆ** : ಸಂವಿಧಾನದ ತರ್ಕಗಳು ಮತ್ತು ಮಾರ್ಗದರ್ಶಿ ಮೌಲ್ಯಗಳನ್ನು ಹೇಳುವ ಸಂವಿಧಾನದ ಪ್ರಾಸ್ತಾವಿಕ ಹೇಳಿಕೆ.

**ದೇಶದ್ರೋಹ** : ತಾನು ನಿಷ್ಠನಾಗಿರುವ ದೇಶದ ಸರ್ಕಾರವನ್ನು ಕಿತ್ತೊಗೆಯುವ ಯತ್ನದ ಅಪರಾಧ.

**ಸಮಾಗಮ** : ಭೇಟಿ ಅಥವಾ ಈ ಹಿಂದೆ ನಿರ್ಧರಿಸಿದ ಭೇಟಿಯ ಸ್ಥಳ.

1. **ಇಲ್ಲಿ ಕೆಲವು ತಪ್ಪು ಹೇಳಿಕೆಗಳಿವೆ. ಪ್ರತಿ ಪ್ರಕರಣದಲ್ಲಿನ ತಪ್ಪನ್ನು ಗುರುತಿಸಿ ಮತ್ತು ಈ ಅಧ್ಯಾಯದಲ್ಲಿ ನೀವು ಓದಿರುವಂತೆ ಇವುಗಳನ್ನು ಸರಿಯಾಗಿ ಬರೆಯಿರಿ.**

   [a] ಸ್ವಾತಂತ್ರ್ಯ ಪಡೆದ ನಂತರ ದೇಶವು ಪ್ರಜಾಸತ್ತಾತ್ಮಕವಾಗಿರಬೇಕೆ ಅಥವಾ ಇಲ್ಲವೇ ಎನ್ನುವ ಕುರಿತು ಸ್ವಾತಂತ್ರ್ಯ ಚಳವಳಿಯ ನಾಯಕರಲ್ಲಿ ಮುಕ್ತ ಚಿಂತನೆಗಳಿದ್ದವು.

   [b] ಸಂವಿಧಾನದ ಎಲ್ಲಾ ನಿಬಂಧನೆಗಳ ಕುರಿತು ಭಾರತದ ಸಾಂವಿಧಾನಿಕ ಸಭೆಯ ಸದಸ್ಯರು ಒಂದೇ ರೀತಿಯ ಅಭಿಪ್ರಾಯವನ್ನು ಹೊಂದಿದ್ದರು.

   [c] ಸಂವಿಧಾನವನ್ನು ಹೊಂದಿರುವ ದೇಶವು ಪ್ರಜಾಸತ್ತಾತ್ಮಕವಾಗಿರತಕ್ಕದ್ದು.

   [d] ಸಂವಿಧಾನ ತಿದ್ದುಪಡಿ ಮಾಡಲು ಆಗುವುದಿಲ್ಲ, ಏಕೆಂದರೆ ಇದು ದೇಶದ ಅತ್ಯುಚ್ಚ ಕಾನೂನಾಗಿದೆ.

2. **ಈ ಕೆಳಗಿನವುಗಳಲ್ಲಿ, ದಕ್ಷಿಣ ಆಫ್ರಿಕಾದಲ್ಲಿ ಪ್ರಜಾಸತ್ತಾತ್ಮಕ ಸಂವಿಧಾನವನ್ನು ರೂಪಿಸುವಲ್ಲಿನ ಅತ್ಯಂತ ಪ್ರಮುಖ ಸಂಘರ್ಷ ಯಾವುದಾಗಿತ್ತು?**

   [a] ದಕ್ಷಿಣ ಆಫ್ರಿಕಾ ಮತ್ತು ಅದರ ನೆರೆಯವರ ನಡುವೆ

   [b] ಪುರುಷರು ಮತ್ತು ಸ್ತ್ರೀಯರ ನಡುವೆ

   [c] ಬಹುಸಂಖ್ಯಾತ ಬಿಳಿಯರು ಮತ್ತು ಅಲ್ಪಸಂಖ್ಯಾತ ಕರಿಯರ ನಡುವೆ

   [d] ಮಿಶ್ರವರ್ಣೀಯ ಅಲ್ಪಸಂಖ್ಯಾತರು ಮತ್ತು ಕರಿಯ ಬಹುಸಂಖ್ಯಾತರ ನಡುವೆ

3. **ಈ ಕೆಳಗಿನವುಗಳಲ್ಲಿ ಯಾವ ನಿಬಂಧನೆಯನ್ನು ಪ್ರಜಾಸತ್ತಾತ್ಮಕ ಸಂವಿಧಾನವು ಹೊಂದಿರುವುದಿಲ್ಲ?**

   [a] ದೇಶದ ಮುಖ್ಯಸ್ಥರ ಅಧಿಕಾರಗಳು

   [b] ದೇಶದ ಮುಖ್ಯಸ್ಥರ ಹೆಸರು

   [c] ಶಾಸಕಾಂಗದ ಅಧಿಕಾರಗಳು

   [d] ದೇಶದ ಹೆಸರು

4. **ಈ ಕೆಳಗಿನ ನಾಯಕರನ್ನು ಅವರು ಸಂವಿಧಾನ ರಚನೆಯಲ್ಲಿ ವಹಿಸಿದ ಪಾತ್ರದ ಜೊತೆ ಹೊಂದಿಸಿ:**

| | |
|---|---|
| (a) ಮೋತಿಲಾಲ್ ನೆಹರು | (i) ಸಾಂವಿಧಾನಿಕ ಸಭೆಯ ಅಧ್ಯಕ್ಷರು |
| (b) ಬಿ.ಆರ್.ಅಂಬೇಡ್ಕರ್ | (ii) ಸಾಂವಿಧಾನಿಕ ಸಭೆಯ ಸದಸ್ಯರು |
| (c) ರಾಜೇಂದ್ರ ಪ್ರಸಾದ್ | (iii) ಕರಡು ಸಮಿತಿಯ ಅಧ್ಯಕ್ಷರು |
| (d) ಸರೋಜಿನಿ ನಾಯ್ಡು | (iv) ಭಾರತಕ್ಕಾಗಿ 1928ರಲ್ಲಿ ಸಂವಿಧಾನವನ್ನು ರಚಿಸಿದರು |

5. **ನೆಹರು ಅವರ 'ವಿಧಿಯೊಂದಿಗಿನ ಸಮಾಗಮ' ಭಾಷಣದ ಸಾರವನ್ನು ಮತ್ತೊಮ್ಮೆ ಓದಿ, ಈ ಕೆಳಗಿನ ಪ್ರಶ್ನೆಗಳನ್ನು ಉತ್ತರಿಸಿ.**

   a. ನೆಹರು ಅವರು ಮೊದಲ ವಾಕ್ಯದಲ್ಲಿ "ಸಮಗ್ರವಾಗಿ ಅಥವಾ ಸಂಪೂರ್ಣವಾಗಿಯಷ್ಟೇ ಅಲ್ಲದೆ'', ಎಂಬ ಅಭಿವ್ಯಕ್ತಿಯನ್ನು ಏಕೆ ಬಳಸಿದ್ದಾರೆ?

   b. ಭಾರತೀಯ ಸಂವಿಧಾನದ ರಚನಾಕಾರರು ಯಾವ ಪ್ರತಿಜ್ಞೆ ಮಾಡಬೇಕೆಂದು ಅವರು ಇಚ್ಛಿಸಿದ್ದರು?

c. “ನಮ್ಮ ತಲೆಮಾರಿನ ಅತ್ಯುನ್ನತ ವ್ಯಕ್ತಿಯ ಮಹತ್ವಾಕಾಂಕ್ಷೆ ಏನೆಂದರೆ– ಪ್ರತಿಯೊಂದು ಕಣ್ಣಿನ ಪ್ರತಿಯೊಂದು ಅಶ್ರುವನ್ನು ಒರೆಸುವುದು.” ಯಾರನ್ನು ಉಲ್ಲೇಖಿಸಿ ಅವರು ಈ ಮಾತನ್ನು ಹೇಳಿದ್ದಾರೆ?

**6. ಇಲ್ಲಿ ಸಂವಿಧಾನದ ಕೆಲವು ಮಾರ್ಗದರ್ಶಿ ಮೌಲ್ಯಗಳನ್ನು ಮತ್ತು ಅವುಗಳ ಅರ್ಥವನ್ನು ನೀಡಲಾಗಿದೆ. ಅವುಗಳನ್ನು ಸರಿಯಾಗಿ ಹೊಂದಿಸಿ ಬರೆಯಿರಿ.**

| | | |
|---|---|---|
| [a] ಸಾರ್ವಭೌಮ | i | ಸರ್ಕಾರವು ಯಾವುದೇ ಧರ್ಮದ ಪರ ವಹಿಸುವುದಿಲ್ಲ. |
| [b] ಗಣತಂತ್ರ | ii | ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಜನರು ಅತ್ಯುಚ್ಚ ಅಧಿಕಾರವನ್ನು ಹೊಂದಿದ್ದಾರೆ. |
| [c] ಭ್ರಾತೃತ್ವ | iii | ದೇಶದ ಮುಖ್ಯಸ್ಥನು ಚುನಾಯಿತ ವ್ಯಕ್ತಿಯಾಗಿರುತ್ತಾನೆ. |
| [d] ಜಾತ್ಯತೀತ | iv | ಸಹೋದರರು ಮತ್ತು ಸಹೋದರಿಯರಂತೆ ಜನರು ಜೀವಿಸಬೇಕು. |

**7. ನೇಪಾಳದ ನಿಮ್ಮ ಮಿತ್ರರೊಬ್ಬರು ಅಲ್ಲಿನ ರಾಜಕೀಯ ಸ್ಥಿತಿಯನ್ನು ವಿವರಿಸಿ ನಿಮಗೆ ಪತ್ರವೊಂದನ್ನು ಬರೆದಿದ್ದಾರೆ. ಅನೇಕ ರಾಜಕೀಯ ಪಕ್ಷಗಳು ರಾಜಪ್ರಭುತ್ವವನ್ನು ವಿರೋಧಿಸುತ್ತಿವೆ. ‘ಚುನಾಯಿತ ಪ್ರತಿನಿಧಿಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡಲು ಪ್ರಸ್ತುತದಲ್ಲಿ ರಾಜನಿಂದ ದತ್ತವಾಗಿರುವ ಸಂವಿಧಾನವನ್ನು ತಿದ್ದುಪಡಿ ಮಾಡಬಹುದಾಗಿದೆ’ ಎಂಬುದಾಗಿ ಕೆಲವರು ಹೇಳುತ್ತಿದ್ದಾರೆ. ಇನ್ನು ಕೆಲವರು, ಗಣತಾಂತ್ರಿಕ ಸಂವಿಧಾನವನ್ನು ರಚಿಸುವುದಕ್ಕಾಗಿ ಸಾಂವಿಧಾನಿಕ ಸಭೆಯನ್ನು ಬೇಡುತ್ತಿದ್ದಾರೆ. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ನಿಮ್ಮ ಮಿತ್ರರಿಗೆ ಉತ್ತರಿಸಿ.**

**8. ಭಾರತವನ್ನು ಯಾವ ಅಂಶಗಳು ಪ್ರಜಾಸತ್ತೆಯನ್ನಾಗಿ ಮಾಡಿದವು ಎನ್ನುವ ಕುರಿತು ಇಲ್ಲಿ ಅಭಿಪ್ರಾಯ ಬೇಧಗಳಿವೆ. ಈ ಪ್ರತಿಯೊಂದು ಅಂಶಗಳಿಗೆ ನೀವು ಎಷ್ಟು ಪ್ರಾಮುಖ್ಯತೆ ನೀಡುತ್ತೀರಿ?**

a. ಭಾರತದಲ್ಲಿ ಪ್ರಜಾಸತ್ತೆಯು ಬ್ರಿಟಿಷ್ ಆಡಳಿತಗಾರರ ಕೊಡುಗೆಯಾಗಿದೆ. ನಾವು ಬ್ರಿಟಿಷ್ ಆಳ್ವಿಕೆಯಡಿ ಪ್ರಾತಿನಿಧಿಕ ಶಾಸಕಾಂಗ ಸಂಸ್ಥೆಗಳೊಂದಿಗೆ ಕೆಲಸ ಮಾಡಲು ತರಬೇತಿ ಪಡೆದೆವು.

b. ಸ್ವಾತಂತ್ರ್ಯ ಹೋರಾಟವು, ವಸಾಹತುಶಾಹಿ ಶೋಷಣೆ ಮತ್ತು ಭಾರತೀಯರಿಗೆ ವಿವಿಧ ಸ್ವಾತಂತ್ರ್ಯಗಳನ್ನು ನಿರಾಕರಿಸಿರುವುದನ್ನು ಪ್ರಶ್ನಿಸಿತು. ಸ್ವತಂತ್ರ ಭಾರತವು ಪ್ರಜಾತಾಂತ್ರಿಕವಲ್ಲದೆ ಬೇರೇನೂ ಆಗಲು ಸಾಧ್ಯವಿರಲಿಲ್ಲ.

c. ಪ್ರಜಾತಂತ್ರದ ಮೇಲೆ ಗಾಢನಂಬಿಕೆ ಹೊಂದಿದ್ದ ನಾಯಕರನ್ನು ನಾವು ಹೊಂದಿದ್ದು ನಮ್ಮ ಅದೃಷ್ಟವೇ ಸರಿ. ಹೊಸದಾಗಿ ಸ್ವಾತಂತ್ರ್ಯ ಪಡೆದ ಇತರ ಅನೇಕ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವವನ್ನು ನಿರಾಕರಿಸಿರುವುದು ಈ ನಾಯಕರು ವಹಿಸಿದ ಪ್ರಮುಖ ಪಾತ್ರವನ್ನು ತೋರಿಸುತ್ತದೆ.

**9. ಈ ಕೆಳಗೆ ನೀಡಿರುವ, 1912ರಲ್ಲಿ ಪ್ರಕಟಗೊಂಡ ನಡತೆಯನ್ನು ಕುರಿತ, ‘ಮ್ಯಾರೀಡ್ವಿಮೆನ್’ ಪುಸ್ತಕದ ಸಾರವನ್ನು ಓದಿರಿ.**

‘ದೇವರು ಸ್ತ್ರೀ ಪ್ರಭೇದವನ್ನು ದೈಹಿಕವಾಗಿ ಮತ್ತು ಭಾವನಾತ್ಮಕವಾಗಿ ತುಂಬಾ ಸೂಕ್ಷ್ಮವಾಗಿ ಮತ್ತು ದುರ್ಬಲವಾಗಿ ರೂಪಿಸಿದ್ದು, ತಮ್ಮ ಆತ್ಮರಕ್ಷಣೆ ಮಾಡಿಕೊಳ್ಳುವಲ್ಲಿನ ಅವರ ಅಸಮರ್ಥತೆಯು ವಿಷಾದನೀಯ. ಹೀಗಾಗಿ ಅವರು ತಮ್ಮ ಜೀವನದುದ್ದಕ್ಕೂ, ತಂದೆ, ಪತಿ ಮತ್ತು ಮಗ – ಹೀಗೆ ಪುರುಷರ ರಕ್ಷಣೆಯಲ್ಲಿರುವಂತೆ ದೇವರು ಗೊತ್ತುಪಡಿಸಿದ್ದಾನೆ. ಆದ್ದರಿಂದ, ಮಹಿಳೆಯರು ಹತಾಶರಾಗಬಾರದು, ಬದಲಾಗಿ ತಮ್ಮನ್ನು ಪುರುಷರ ಸೇವೆಗೆ ಮುಡಿಪಾಗಿಡಬಲ್ಲೆವು’ ಎಂಬ ಗ್ರಹಿಕೆಯ ನಿಟ್ಟಿನಲ್ಲಿ ತಮ್ಮನ್ನು

ಅಭ್ಯಾಸ

ಉಪಕೃತರೆಂಬುದಾಗಿ ಭಾವಿಸಬೇಕು. ಈ ವಾಕ್ಯವೃಂದದಲ್ಲಿ ವ್ಯಕ್ತಪಡಿಸಿರುವ ಮೌಲ್ಯಗಳು ನಮ್ಮ ಸಂವಿಧಾನಕ್ಕೆ ಆಧಾರವೆನಿಸಿರುವ ಮೌಲ್ಯಗಳನ್ನು ಪ್ರತಿಫಲಿಸುತ್ತವೆಯೆಂದು ನಿಮಗನಿಸುತ್ತದೆಯೇ? ಅಥವಾ ಇವು ಸಂವಿಧಾನದ ಮೌಲ್ಯಗಳಿಗೆ ವಿರುದ್ಧವಾಗಿವೆಯೇ?

**10. ಸಂವಿಧಾನದ ಕುರಿತ ಈ ಕೆಳಗಿನ ಹೇಳಿಕೆಗಳನ್ನು ಓದಿರಿ. ಇಲ್ಲಿರುವ ಪ್ರತಿ ಹೇಳಿಕೆ ಸರಿಯೋ, ತಪ್ಪೋ ಎನ್ನುವ ಕುರಿತು ಕಾರಣಗಳನ್ನು ನೀಡಿ.**

(a) ಸಂವಿಧಾನದ ನಿಯಮಗಳ ಅಧಿಕಾರವು ಇತರ ಯಾವುದೇ ಕಾನೂನಿನ ಅಧಿಕಾರದಂತೆಯೇ ಇದೆ.

(b) ಸರ್ಕಾರದ ಇತರ ಅಂಗಸಂಸ್ಥೆಗಳನ್ನು ಹೇಗೆ ರಚಿಸಬೇಕು ಎಂಬುದನ್ನು ಸಂವಿಧಾನವು ನಿರೂಪಿಸುತ್ತದೆ.

(c) ನಾಗರಿಕರ ಹಕ್ಕುಗಳು ಮತ್ತು ಸರ್ಕಾರದ ಅಧಿಕಾರದ ಮೇಲಿನ ಮಿತಿಗಳನ್ನು ಸಂವಿಧಾನದಲ್ಲಿ ನಿರೂಪಿಸಲಾಗಿದೆ.

(d) ಸಂವಿಧಾನವು ಸಂಸ್ಥೆಗಳ ಕುರಿತಾಗಿದ್ದು, ಮೌಲ್ಯಗಳಿಗೆ ಸಂಬಂಧಿಸಿರುವುದಿಲ್ಲ.

---




ಸಂವಿಧಾನ ತಿದ್ದುಪಡಿ ಅಥವಾ ಸಂವಿಧಾನದ ತಿದ್ದುಪಡಿಯ ಬೇಡಿಕೆಯನ್ನು ಕುರಿತ ಚರ್ಚೆಯ ವರದಿಗಾಗಿ ಸುದ್ದಿಪತ್ರಿಕೆಗಳನ್ನು ಗಮನಿಸಿ. ಉದಾಹರಣೆಗೆ, ನೀವು ಶಾಸಕಾಂಗಗಳಲ್ಲಿ ಮಹಿಳೆಯರಿಗೆ ಮೀಸಲಾತಿ ನೀಡುವ ಸಂವಿಧಾನದ ತಿದ್ದುಪಡಿಯ ಬೇಡಿಕೆಯತ್ತ ಗಮನಹರಿಸಬಹುದು. ಈ ಬಗ್ಗೆ ಸಾರ್ವಜನಿಕ ಚರ್ಚೆ ನಡೆದಿತ್ತೇ? ತಿದ್ದುಪಡಿಯ ಪರವಾಗಿ ಯಾವ ಕಾರಣಗಳನ್ನು ಮುಂದಿಡಲಾಗಿತ್ತು? ಸಂವಿಧಾನದ ತಿದ್ದುಪಡಿಗೆ ವಿವಿಧ ಪಕ್ಷಗಳು ಹೇಗೆ ಪ್ರತಿಕ್ರಿಯಿಸಿದವು? ತಿದ್ದುಪಡಿ ಸಾಧ್ಯವಾಯಿತೇ?